# ಜಾನಪದ ಲೋಕ : ಸಂಕಥನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ಪ್ರಬಂಧ)

ಸಂಶೋಧಕ

**ವೆಂಕಟೇಶ.ಸಿ.**

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ






ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಜಾನಪದ ಲೋಕ : ಸಂಕಥನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್ ಪ್ರಬಂಧ)

ಸಂಶೋಧಕ

**ವೆಂಕಟೇಶ.ಸಿ.**

ಮಾರ್ಗದರ್ಶಕರು

**ಡಾ. ಮಂಜುನಾಥ ಬೇವಿನಕಟ್ಟಿ**

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮

# ಪ್ರಮಾಣ ಪತ್ರ

ಜಾನಪದ ಲೋಕ : ಸಂಕಥನ ಎಂಬ ಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

ವೆಂಕಟೇಶ.ಸಿ.

ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿ

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

ಶ್ರೀ ವೆಂಕಟೇಶ.ಸಿ. ಇವರು ಜಾನಪದ ಲೋಕ : ಸಂಕಥನ ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಜಾನಪದ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಈ ಪ್ರೌಢ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

ಡಾ. ಮಂಜುನಾಥ ಬೇವಿನಕಟ್ಟಿ

ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

## ಕೃತಜ್ಞತೆಗಳು


- ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ. ಎ. ಮುರಿಗೆಪ್ಪ ಮತ್ತು ಮಾನ್ಯ ಕುಲಸಚಿವರಾದ ಡಾ. ಹಿ.ಚಿ. ಬೋರಲಿಂಗಯ್ಯ ಅವರಿಗೆ,
- ಅಧ್ಯಯನಾಂಗದ ನಿರ್ದೇಶಕರಾದ ಡಾ. ಡಿ. ಪಾಂಡುರಂಗಬಾಬು ಅವರಿಗೆ,
- ಅಧ್ಯಯನ ಕ್ರಮವನ್ನು ಬೋಧಿಸಿ ಮಾರ್ಗದರ್ಶನ ನೀಡಿದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೆ, ನಮ್ಮನ್ನು ಪ್ರೀತಿಯಿಂದ ಕಂಡು ವಿಚಾರಿಸಿ ಅಧ್ಯಯನದ ತಾತ್ತ್ವಿಕ ಬೋಧನೆಯನ್ನು ನೀಡಿದ ವಿಭಾಗದ ಮುಖ್ಯಸ್ಥರಾದ ಡಾ. ಹೆಬ್ಬಾಲೆ ಕೆ. ನಾಗೇಶ್ ಅವರಿಗೆ, ಪ್ರಾಧ್ಯಾಪಕರಾದ ಸ.ಚಿ. ರಮೇಶ್ ಅವರಿಗೆ, ಅಧ್ಯಾಪಕರುಗಳಾದ ಡಾ. ಮೊಗಳ್ಳಿ ಗಣೇಶ್, ಡಾ. ಹರಿಶ್ಚಂದ್ರ ದಿಗ್ಸಂಗಿಕರ್, ಡಾ. ಸಿ.ಟಿ. ಗುರುಪ್ರಸಾದ್ ಅವರಿಗೆ, ಬೋಧಕೇತರ ಸಿಬ್ಬಂದಿ ವರ್ಗದವರಾದ ಶ್ರೀ ಬಸವರಾಜು ಮತ್ತು ಶ್ರೀ ಅಬ್ದುಲ್ ನಬಿ ಅವರಿಗೆ,
- ನನ್ನ ಎಂ.ಫಿಲ್. ಅಧ್ಯಯನಕ್ಕೆ ಸಹಕಾರ ನೀಡಿದ ಡಾ. ಸಿದ್ಧಗಂಗಮ್ಮ ಅವರಿಗೆ,
- ಸದಾ ನನ್ನ ಓದಿನ ಕಾಳಜಿ, ಕಳಕಳಿಯನ್ನು ಹೊತ್ತಿರುವ ಅಪ್ಪ ಶ್ರೀ ಚಿಕ್ಕ ತಿಮ್ಮಯ್ಯ, ಅಮ್ಮ ಶ್ರೀಮತಿ ವೆಂಕಟಲಕ್ಷ್ಮಮ್ಮ ಮತ್ತು ಅಣ್ಣ ಶ್ರೀ ಸಂಪತ್‌ಕುಮಾರ್, ತಂಗಿಯರಾದ ಕುಮಾರಿ ವನಿತ, ಕುಮಾರಿ ಶಶಿಕಲಾ ಹಾಗೂ ನನ್ನ ಪ್ರೀತಿಯ ಎಲ್ಲಾ ಬಂಧುಗಳಿಗೆ,
- ಅಮೂಲ್ಯ ಗ್ರಂಥಗಳನ್ನು ಒದಗಿಸಿಕೊಟ್ಟ ಗ್ರಂಥಾಲಯ ಸಿಬ್ಬಂದಿ ವರ್ಗಕ್ಕೆ,
- ಎಂ.ಫಿಲ್. ಸಂಶೋಧನೆಗೆ ನೆರವಾದ ಡಾ. ಚಕ್ಕರೆ ಶಿವಶಂಕರ್, ಡಾ. ಕುರವ ಬಸವರಾಜ್, ಸರಸವಾಣಿ ಹಾಗೂ ಸಿಬ್ಬಂದಿ ವರ್ಗದವರಿಗೆ,
- ಸ್ನೇಹಿತರಾದ ರಂಗನಾಥ ಕೆ., ಬಸವರಾಜ ಎ.ಕೆ., ಮಲ್ಲಿಕಾರ್ಜುನ ಕೆ., ಎಲ್.ಡಿ. ದೂರಣ್ಣವರ್, ನಿಂಗಪ್ಪ ಮಾದಣ್ಣವರ್, ಪರಮೇಶ್ವರ ಸಿ.ಜಾನೆ., ಅಬ್ದುಲ್‌ನಿಶಾರ್, ಹೊನ್ನೂರ್‌ಸಾಬ್, ಸ್ನೇಹಿತಿಯರಾದ ಅಂಜಲಿದೇವಿ ಎಂ., ಮಂಗಳಾ ಬಿ.ಎಸ್., ಅನಿತ ಕೆ.,
- ಅಧ್ಯಯನವು ಯಶಸ್ವಿಯಾಗಲು ಸಹಕಾರ ನೀಡಿದ ಜಗದೀಶ್ ಕುಮಾರ್, ಸವಿತ, ಬಸವರಾಜು ಎ.ಡಿ., ವೀರೇಶ್ ಜಾನೇಕಲ್, ಯರ್ರಿಸ್ವಾಮಿ, ನಿರಂಜನ ರಾ.ನ., ಮಾರ್ಕೆಂಡೇಯ, ಇಸ್ಮಾಯಿಲ್ ಜಬೀರ್, ವೀರೇಶ ಉತ್ತಂಗಿ, ರಾಮು, ಹೋಳಿ ಬಸಪ್ಪ, ಓಬಯ್ಯ, ಕುಮಾರ್, ರವಿ, ಚಿಂತಾಮಣಿ, ಸೀತಾರಾಮ್ ಹಾಗೂ ವಿದ್ಯಾರ್ಥಿನಿಲಯದ ಎಲ್ಲಾ ಮಿತ್ರರಿಗೂ,
- ಪ್ರಬಂಧ ರಚನೆಯಲ್ಲಿ ಅಕ್ಷರ ಜೋಡಣೆ ಮಾಡಿಕೊಟ್ಟ ಪ್ರಜ್ವಲ್ ಗ್ರಾಫಿಕ್ಸ್‌ನ ಶ್ರೀಮತಿ ಎ. ನಾಗವೇಣಿ ಮತ್ತು ಶ್ರೀ ಜೆ. ಬಸವರಾಜ ಅವರಿಗೂ

ಪ್ರೀತಿಯ ಕೃತಜ್ಞತೆಗಳು.

ಸ್ಥಳ : ವಿದ್ಯಾರಣ್ಯ

ದಿನಾಂಕ :

ವೆಂಕಟೇಶ.ಸಿ.

ಎಂ.ಫಿಲ್. ಸಂಶೋಧನಾ ವಿದ್ಯಾರ್ಥಿ

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ




ಜಾನಪದ ಲೋಕದ ನಕ್ಷೆ

# ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಮಹತ್ವ

**ಜಾ**ನಪದ ನಮಗಿಂದು ಹಳ್ಳಿಯ ಹಾಡಾಗಿ ಉಳಿದಿಲ್ಲ, ಜನಪ್ರಿಯ ಪಳೆಯುಳಿಕೆಯು ಅಲ್ಲ, ಗ್ರಾಮೀಣ ಪ್ರದೇಶದ ಅನಕ್ಷರಸ್ಥ ಸಮುದಾಯದ ನಡುವೆ ಬದುಕಿ ಉಳಿದಿರುವ ಹಾಡು, ಕುಣಿತ, ಪ್ರದರ್ಶನ, ಹಳೆಯ ಪಳೆಯ ಸರಕು ಸರಂಜಾಮುಗಳ ದಾಖಲಾತಿ ಸಂಗ್ರಹವಾಗಿಯಷ್ಟೆ ಉಳಿದಿಲ್ಲ. ಸಂಸ್ಕೃತಿಯೊಂದು ಸ್ಥಿರ ಬಿಂದುವಲ್ಲ. ಅದು ನಿರಂತರ ಸಾಗುತ್ತಿರುವ ಪ್ರವಾಹ ಎಂಬುದನ್ನು ಒಪ್ಪಿಕೊಂಡು ನಮ್ಮ ಅಧ್ಯಯನ ಸಾಗಿ ಬರುತ್ತಿರುವುದರಿಂದ ಜಾನಪದದ ಬಗೆಗಿನ ಪರಿಭಾವನೆ ಇದೀಗ ಬದಲಾಗಿದೆ.[೧]

ಇಂದಿನ ಆಧುನಿಕ, ವೈಜ್ಞಾನಿಕ, ತಾಂತ್ರಿಕತೆ ತಂದ ಸಮಾಜದಲ್ಲಿ ಜಾನಪದ ಹುಟ್ಟುವ ಮೂಲ ಹಿಂದಿನಷ್ಟು ಸಮೃದ್ಧ ಅಲ್ಲದೆ ಹೋಗಬಹುದು. ಆದರೆ ಬದಲಾದ ಸಂದರ್ಭದಲ್ಲಿ ಜಾನಪದ ಇದ್ದೇ ಇರುತ್ತದೆ. ನಿನ್ನೆಯ ರೂಪದಲ್ಲಿ ಅಲ್ಲ, ಇಂದಿನ ಕಾಲಕ್ಕೆ ತಕ್ಕಂತೆ ಹೊಸ ರೂಪದಲ್ಲಿ ಬೆಳೆಯುತ್ತಿರುವ ಜ್ಞಾನಶಾಖೆಯಾಗಿರುವುದರಿಂದ ಪಾರಂಪರಿಕ ತಿಳುವಳಿಕೆಗಳು ಹೊಸ ಆಕಾರ ಪಡೆದುಕೊಳ್ಳುತ್ತಿವೆ. ಪ್ರಸ್ತುತ ಬದುಕಿಗೆ ಸಲ್ಲದ ನೇತ್ಯಾತ್ಮಕ ಅಂಶಗಳು ಅಧ್ಯಯನದಲ್ಲಿ ಸೋಸಿಕೆಗೆ ಒಳಗಾಗಿ ಸಲ್ಲುವ ಅಂಶಗಳು ಮಾತ್ರ ಬದುಕಿ ಉಳಿಯುತ್ತಿವೆ.

ಅಂದರೆ ಇಂದು ಜಾನಪದ ಜ್ಞಾನಶಾಖೆಯಲ್ಲಿ ಮಾಹಿತಿ ಸಂಗ್ರಹ, ಪಠ್ಯಗಳ ವಿಶ್ಲೇಷಣೆಯ ಕೆಲಸವಷ್ಟೆ ನಡೆಯುತ್ತಿಲ್ಲ. ಸಮಕಾಲೀನ ಬದುಕಿನಲ್ಲಿ ಅದರ ಕಾರ್ಯ ಹಾಗೂ ಪ್ರಸ್ತುತತೆಯನ್ನು ಶೋಧಿಸುತ್ತಾ ಅದರ ಚಲನಶೀಲತೆಯನ್ನು ಮನ್ನಿಸುತ್ತ ಅದು ತೋರುವ ಬದುಕಿನ ಎಲ್ಲ ಬಹುತ್ವಗಳನ್ನು ಒಪ್ಪಿಕೊಳ್ಳುತ್ತ ಅಧ್ಯಯನ ಸಾಗಿ ಬರುತ್ತಿದೆ.[೨]

ಇಂತಹ ಒಂದು ಕೆಲಸವನ್ನು ಜಾನಪದ ಲೋಕವು ಮಾಡುತ್ತಿದೆ. ಇದು ಜಾನಪದ ದಿಗ್ಗಜ ಡಾ. ಎಚ್.ಎಲ್. ನಾಗೇಗೌಡರ ಕನಸಿನ ಕೂಸು. ಸುಮಾರು ನಲವತ್ತು ವರ್ಷಗಳ ಸಾರ್ಥಕ ಸೇವಾವಧಿಯು ೧೯೭೮ರಲ್ಲಿ ಕೊನೆಗೊಂಡಾಗ ಡಾ. ಎಚ್.ಎಲ್. ನಾಗೇಗೌಡರ ವಿಶ್ರಾಂತ ಜೀವನದ ಅವಿಶ್ರಾಂತತೆಯ ಬದುಕು ಪ್ರಾರಂಭವಾಯಿತು. ಜಾನಪದ ಸಂರಕ್ಷಣೆ, ಸಂವರ್ಧನೆ, ಪ್ರಚಾರ ಮತ್ತು ಪ್ರಸಾರಗಳನ್ನು ಪ್ರಧಾನ ಆಶಯಗಳನ್ನಾಗಿಸಿಕೊಂಡು ೧೯೭೯ರಲ್ಲಿ ಗೌಡರು ಸ್ಥಾಪಿಸಿದ "ಕರ್ನಾಟಕ

ಜಾನಪದ ಟ್ರಸ್ಟ್" ನಾಡಿನಾದ್ಯಂತ ಜಾನಪದ ಚಟುವಟಿಕೆಗಳಿಗೆ ನಾಂದಿ ಹಾಡಿತು. ಇದರ ಅಧೀನ ಸಂಸ್ಥೆಯೇ ಜಾನಪದ ಲೋಕ. ಇದರ ನಿರ್ಮಾತೃ ಡಾ. ಎಚ್.ಎಲ್. ನಾಗೇಗೌಡರು.

ಜಾನಪದ ಲೋಕವು ಜಾನಪದ ಸಂಸ್ಕೃತಿಯ ಸೌರಭವನ್ನು ಪಸರಿಸಲೆಂದು ಸ್ಥಾಪಿಸಲ್ಪಟ್ಟ ಕೇಂದ್ರ. ಜನಪದರ ಬಾಳು-ಬದುಕು, ಕಲೆ-ಆಚರಣೆ, ಹಬ್ಬ-ಹರಿದಿನ, ಕುಣಿತ-ಮೆರೆತ, ಹಾಡು-ಪಾಡುಗಳ ಸಂಗ್ರಹ, ಸಂಶೋಧನೆ, ಪ್ರಸಾರ ಜಾನಪದ ಲೋಕದ ಗುರಿಯಾಗಿದೆ.[೬]

ಕನ್ನಡ ನಾಡಿನ ೨೦ನೆಯ ಶತಮಾನದ ಚರಿತ್ರೆಯ ಅದ್ಭುತಗಳಲ್ಲಿ ಒಂದು ನಾಗೇಗೌಡರು ರೂಪಿಸಿದ ಜಾನಪದ ಲೋಕ. ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ರಾಮನಗರದ ಬಳಿ ಸುಮಾರು ೧೫ ಎಕರೆ ಪ್ರದೇಶದಲ್ಲಿ ಸ್ಥಾಪಿಸಲಾಗಿರುವ ಜಾನಪದ ಲೋಕವು ನಾಗೇಗೌಡರು ಕಂಡ ಹಲವು ವರ್ಷಗಳ ಕನಸಿನ ಕೂಸು. ಈ ಕನಸು ಅವರ ಕಠಿಣ ಪರಿಶ್ರಮ, ಸಂಘಟನಾ ಶಕ್ತಿಯ ಫಲವಾಗಿ ೧೯೯೪ರ ಮಾರ್ಚ್ ೧೨ ರಂದು ನನಸಾಯಿತು. ಕಳೆದ ಹಲವು ವರ್ಷಗಳಿಂದೀಚೆಗೆ ಜಾನಪದ ಲೋಕವು ದೇಶದ ಅತ್ಯಂತ ಮಹತ್ವದ ಸಾಂಸ್ಕೃತಿಕ ಕೇಂದ್ರವಾಗಿ ಬೆಳವಣಿಗೆ ಕಂಡಿದೆ. ಗೌಡರು ಜಾನಪದ ಲೋಕದ ಬೃಹತ್ ಪಾಳೆಯವನ್ನು ಕಟ್ಟುವ ಕೆಲಸದಲ್ಲಿ ಯಶಸ್ವಿಯಾಗಿದ್ದಾರೆ.[೭]

ಜಾನಪದ ಲೋಕದ ಮಹತ್ವದ ಆಕರ್ಷಣೆಯೇ ಅದರ ಮಹಾದ್ವಾರ. ಹರಿಗೆ ಮತ್ತು ಕೊಂಬುಗಳಿಂದ ಅಲಂಕೃತವಾದ ವಿಶಾಲ ಮಹಾದ್ವಾರ. ಇಕ್ಕೆಲಗಳಲ್ಲಿ ಎತ್ತರದ ನಂದೀಧ್ವಜಗಳು. ಶೈವ ಮತ್ತು ವೈಷ್ಣವ ಸಂಪ್ರದಾಯಗಳೆರಡರ ಸಮ್ಮಿಲನ ಈ ಮಹಾದ್ವಾರದ ರಚನೆಯಲ್ಲಡಗಿದೆ. ಒಳಹೋಗುತ್ತಿದ್ದಂತೆ ಎದ್ದು ಕಾಣುವ ಬೀಸುವ ಕಲ್ಲಿನ ಅರ್ಥಪೂರ್ಣವಾದ ಲಾಂಛನ, ಕೋಣಗಳನ್ನು ಕಟ್ಟಿ ಎಳೆಸುತ್ತಿದ್ದ ಬೃಹತ್ತಾದ ಬೀಸುವ ಕಲ್ಲು, ಗಿರಿಜನರ ಅಡುಗೆ ಮನೆಯ ವಿವಿಧ ವಸ್ತುಗಳ ಸಂಗ್ರಹಾಲಯವಾದ ಲೋಕಮಾತಾ ಮಂದಿರ, ನಾಗೇಗೌಡರ ಜಾನಪದ ಬೆಳವಣಿಗೆಯನ್ನು ಪ್ರತಿಬಿಂಬಿಸುವ ಚಿತ್ರಕುಟೀರ, ಕಲಾವಿದರು ತಂಗಲೆಂದೇ ನಿರ್ಮಿಸಿರುವ ತೊಟ್ಟಿ-ಕಂಬಗಳನ್ನೊಳಗೊಂಡ ದೊಡ್ಡಮನೆ, ಜಾನಪದಕ್ಕೆ ಸಂಬಂಧಪಟ್ಟ ಎಲ್ಲಾ ಬಗೆಯ ಸುಮಾರು ೫೦೦೦ಕ್ಕೂ ಹೆಚ್ಚು ವಸ್ತುಗಳನ್ನು ಕಲಾತ್ಮಕವಾಗಿ ಹಾಗೂ ವೈಜ್ಞಾನಿಕವಾಗಿ ಕಾಯ್ದಿರಿಸಿರುವ ಎರಡು ಅಂತಸ್ತುಗಳ ಕಟ್ಟಡವಾದ ಲೋಕಮಹಲ್, ಕಲ್ಲಿನಲ್ಲಿ ಕಥೆ ಹೇಳುವ ಶಿಲ್ಪಮಾಳ, ಆಯಗಾರರ ಮಾಳ ಜಾನಪದ ಲೋಕವನ್ನು ವೀಕ್ಷಿಸಲೆಂದು ಬರುವವರನ್ನು ಹರಸಲೆಂದೇ ಇಲ್ಲಿ ನೆಲೆಯಾಗಿರುವ ಲೋಕಪ್ರಿಯ ಮಹಾಗಣಪತಿಯ ದೇವಸ್ಥಾನ. ಸುಮಾರು ೮೦೦ ರಿಂದ ೧೦೦೦ ಮಂದಿ ಕುಳಿತುಕೊಳ್ಳಬಹುದಾದ ಗ್ರೀಕ್ ಮಾದರಿಯ ಬೃಹತ್ತಾದ ಬಯಲು ರಂಗಮಂದಿರ. ಮಕ್ಕಳ ಮನರಂಜನೆಗೆ ಎತ್ತಿನಗಾಡಿ ಸವಾರಿ, ಕುದುರೆ ಸವಾರಿ. ಆಟವಾಡಲು ವಿಶಾಲವಾದ ಆಟದ ಮಾಳ ಇತ್ಯಾದಿಗಳೆಲ್ಲವೂ ಜಾನಪದ ಲೋಕದಲ್ಲಿವೆ.

ಕರಕುಶಲ ಕಲಾವಿದರು ಈ ಲೋಕದಲ್ಲಿದ್ದುಕೊಂಡು ಕುಶಲ ವಸ್ತುಗಳನ್ನು ತಯಾರಿಸುತ್ತಿದ್ದಾರೆ. ಡೊಳ್ಳು ಕುಣಿತ, ಸುಗ್ಗಿ ಕುಣಿತ, ಕೋಲಾಟ, ಗೊರವರ ಕುಣಿತ ಇವೇ ಮೊದಲಾದ ಪ್ರದರ್ಶಕ

ಕಲೆಗಳಲ್ಲಿ ತರಬೇತಿ ನೀಡಿ ಜಾನಪದ ಲೋಕದ್ದೇ ಆದ ಕಲಾ ತಂಡಗಳನ್ನು ರೂಪಿಸಲಾಗಿದೆ. ಬೆಂಗಳೂರು ವಿಶ್ವವಿದ್ಯಾನಿಲಯವು ಜಾನಪದ ಲೋಕವನ್ನು ಸಂಶೋಧನಾ ಕೇಂದ್ರವಾಗಿ ಮಾನ್ಯ ಮಾಡಿದ್ದು, ಈಗಾಗಲೇ ನಾಲ್ಕು ಮಂದಿ ಸಂಶೋಧನಾ ವಿದ್ಯಾರ್ಥಿಗಳು ಪಿಎಚ್.ಡಿ. ಪದವಿಗಾಗಿ ಜಾನಪದ ಲೋಕದ ಮುಖಾಂತರ ಸಂಶೋಧನೆ ನಡೆಸುತ್ತಿದ್ದಾರೆ. ೧೯೯೯ರಿಂದ ಜಾನಪದ ಮಹಾವಿದ್ಯಾಲಯವು ಪ್ರಾರಂಭವಾಗಿದ್ದು, ಇದಕ್ಕೆ ಬೆಂಗಳೂರು ವಿಶ್ವವಿದ್ಯಾಲಯವು ಸಂಯೋಜನಾ ಅನುಮೋದನೆ ನೀಡಿದೆ. ಈ ಮಹಾವಿದ್ಯಾಲಯದಲ್ಲಿ ಜಾನಪದ ಡಿಪ್ಲೊಮಾ ಮತ್ತು ಜಾನಪದ ಸರ್ಟಿಫಿಕೇಟ್ ಕೋರ್ಸ್‌ಗಳನ್ನು ನಡೆಸಲಾಗುತ್ತಿದೆ.

ಜಾನಪದ ಅಭಿರುಚಿ ಶಿಬಿರ, ಜಾನಪದ ಸಂಶೋಧನಾ ಕಮ್ಮಟ, ವಿಚಾರ ಸಂಕಿರಣಗಳನ್ನು ಜಾನಪದ ಲೋಕದಲ್ಲಿ ನಿಯತವಾಗಿ ನಡೆಸಿಕೊಂಡು ಬರಲಾಗುತ್ತಿದೆ. ಸುಸಜ್ಜಿತವಾದ ಜಾನಪದ ಗ್ರಂಥಾಲಯ ಒಂದನ್ನು ಸ್ಥಾಪಿಸಲಾಗಿದೆ. ಪ್ರತೀ ವರ್ಷ ಫೆಬ್ರವರಿ-ಮಾರ್ಚ್ ತಿಂಗಳಿನಲ್ಲಿ ಲೋಕೋತ್ಸವ, ಅಕ್ಟೋಬರ್ ತಿಂಗಳಿನಲ್ಲಿ ದಸರಾ ಉತ್ಸವ, ಜುಲೈ ತಿಂಗಳಿನಲ್ಲಿ ಗಾಳಿಪಟ ಉತ್ಸವಗಳನ್ನು ತಪ್ಪದೆ ಆಚರಿಸಲಾಗುತ್ತಿದೆ. ಒಟ್ಟಿನಲ್ಲಿ ಜಾನಪದ ಲೋಕವು ವಿದ್ವಾಂಸರು, ಆಸಕ್ತರು, ಸಂಶೋಧಕರ ಪಾಲಿಗೆ ಅಮೂಲ್ಯವಾದ ಆಕರ ಜಗತ್ತು. ಸಂಶೋಧಕರಿಗೆ ಸಹಸ್ರಾರು ಗ್ರಾಮೀಣ ವಸ್ತುಗಳು, ಧ್ವನಿ ಮುದ್ರಿಕೆಗಳು, ಉತ್ತಮ ಗ್ರಂಥ ಭಂಡಾರ, ವೀಡಿಯೋ ಚಿತ್ರೀಕರಣ ಮಾಹಿತಿ, ಪ್ರೇಕ್ಷಕರ ಸಲುವಾಗಿ ಜಾನಪದ ಕಲಾ ಮಹೋತ್ಸವಗಳು, ಆಸಕ್ತರಿಗೆ ಅಭಿರುಚಿ ಮೂಡಿಸುವ ಶಿಬಿರಗಳು, ಜನಪದ ಕಲೆಗಳ ತರಬೇತಿ ಶಿಬಿರಗಳು ಹೀಗೆ ನಿರಂತರ ಜಾನಪದೀಯ ಚಟುವಟಿಕೆಗಳ ಆಗರವಾಗಿರುವ ಜಾನಪದ ಲೋಕವು ಜಗತ್ತಿನ ಅತ್ಯುತ್ತಮ ಜಾನಪದ ಕೇಂದ್ರಗಳಲ್ಲಿ ಒಂದಾಗಿದೆ. ಜಗತ್ತಿನ ಜಾನಪದ ಭೂಪಟದಲ್ಲಿ ಕರ್ನಾಟಕದ ಛಾಪನ್ನು ಮೂಡಿಸಿದ ಯಶಸ್ಸು ಡಾ. ಎಚ್.ಎಲ್. ನಾಗೇಗೌಡರದು."

**ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ಜಾನಪದ ಲೋಕವನ್ನು ಕುರಿತಂತೆ ಇದುವರೆಗೆ ಕೇವಲ ಬೆರಳೆಣಿಕೆಯಷ್ಟು ಮಂದಿ ಮಾತ್ರ ವಿಸ್ತೃತ ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ಅದರಲ್ಲಿ ಮೊದಲಿಗೆ ಮೈಸೂರು ವಿಶ್ವವಿದ್ಯಾಲಯದ ಲೋಕೇಶ್ ಬಿ.ವಿ. ಎಂಬುವವರು 'ಜಾನಪದ ಲೋಕ ಅಧ್ಯಯನ' ಕುರಿತು ಸಂಶೋಧನೆ ಮಾಡಿದ್ದಾರೆ. ಇವರು ತಮ್ಮ ಪ್ರಬಂಧದದಲ್ಲಿ ಜಾನಪದ ಲೋಕದಲ್ಲಿ ಬರುವ ವಸ್ತುಸಂಗ್ರಹಾಲಯ, ಜನಪದ ಕಲೆಗಳು, ಜನಪದ ಶಿಕ್ಷಣ, ಕಮ್ಮಟಗಳು, ಅಭಿರುಚಿ ಶಿಬಿರಗಳು, ವಿಚಾರ ಸಂಕಿರಣಗಳು, ಗ್ರಾಮೀಣ ಕ್ರೀಡೆಗಳು, ಇನ್ನೂ ಹಲವು ವಿಚಾರಗಳನ್ನು ಕುರಿತು ಸಂಶೋಧನೆಯನ್ನು ಕೈಗೊಂಡಿದ್ದಾರೆ.

ಮೈಸೂರು ವಿಶ್ವವಿದ್ಯಾಲಯದ ಭಾಗ್ಯ ಎಸ್. ಎಂಬುವವರು 'ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜನಪದ ಕಲಾವಿದರು' ಎಂಬ ವಿಷಯದಲ್ಲಿ ಸಂಶೋಧನೆ ಮಾಡಿದ್ದಾರೆ. ಇವರು ಜಾನಪದ ಲೋಕದಲ್ಲಿ ರುವ ಜನಪದ ಕಲಾವಿದರನ್ನು ಅಧ್ಯಯನದ ವ್ಯಾಪ್ತಿಗೆ ಆಯ್ಕೆ ಮಾಡಿಕೊಂಡು, ಜನಪದ ಕಲಾವಿದರು ಹೇಗೆ ಪ್ರದರ್ಶನ ನೀಡುತ್ತಾರೆ. ಅವರನ್ನು ಹೇಗೆ ತರಬೇತಿಗೊಳಿಸಲಾಗುತ್ತಿದೆ. ತರಬೇತಿ ಪಡೆದ ಕಲಾವಿದರು

ಹೇಗೆ ಬೇರೆ ಬೇರೆ ಸ್ಥಳಗಳಲ್ಲಿ ಪ್ರದರ್ಶನ ನೀಡುತ್ತಿದ್ದಾರೆ ಎಂಬುದನ್ನು ತಮ್ಮ ಸಂಶೋಧನೆಯಲ್ಲಿ ತಿಳಿಸಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯದ ಶಾಂತಲಾ ಆರ್. ಹೆಗಡೆ ಎಂಬುವವರು 'ದೇಶಿಯ ಪರಂಪರೆ ಸಂಗ್ರಹ ಮತ್ತು ದಾಖಲೀಕರಣ : ಉಡುಪಿಯ ಆರ್.ಆರ್.ಸಿ. ಮತ್ತು ರಾಮನಗರದ ಜಾನಪದ ಲೋಕ' ಎಂಬ ವಿಷಯವನ್ನು ಕುರಿತು ಸಂಶೋಧನೆ ಮಾಡಿದ್ದಾರೆ. ಇವರು ಜಾನಪದ ಲೋಕದಲ್ಲಿನ ವಸ್ತುಸಂಗ್ರಹಾಲಯಗಳನ್ನು ಆಧಾರವಾಗಿಟ್ಟುಕೊಂಡು ತಮ್ಮ ಸಂಶೋಧನೆಯನ್ನು ಮಾಡಿದ್ದಾರೆ.

ದ್ರಾವಿಡ ವಿಶ್ವವಿದ್ಯಾಲಯ ಕುಪ್ಪಂನ ಅಂಬಿಕಾ ಎಂಬುವವರು 'ಎಚ್.ಎಲ್. ನಾಗೇಗೌಡರ ಜಾನಪದ ಸಾಹಿತ್ಯದ ಕಿರುನೋಟ ಒಂದು ಅಧ್ಯಯನ' ಎಂಬ ವಿಷಯದ ಆಧಾರದ ಮೇಲೆ ಸಂಶೋಧನೆಯನ್ನು ಮಾಡಿದ್ದಾರೆ. ಇವರು ಜಾನಪದ ದಿಗ್ಗಜ ಡಾ. ಎಚ್.ಎಲ್. ನಾಗೇಗೌಡರ ಜೀವನ ಮತ್ತು ಸಾಧನೆಯನ್ನು ತಿಳಿಸುವುದರ ಜೊತೆಗೆ ಅವರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ತಮ್ಮ ಸಂಶೋಧನೆಯಲ್ಲಿ ತಿಳಿಸಿದ್ದಾರೆ.

ತುಮಕೂರು ವಿಶ್ವವಿದ್ಯಾಲಯದ ನವೀನ್ ಟಿ.ಆರ್. ಎಂಬುವವರು 'ಎಚ್.ಎಲ್. ನಾಗೇಗೌಡರ ಬದುಕು-ಬರಹ ಒಂದು ಅಧ್ಯಯನ' ಎಂಬ ವಿಷಯದಲ್ಲಿ ಸಂಶೋಧನೆ ಕೈಗೊಂಡು ಅವರು ನಾಗೇಗೌಡರ ಬಾಳು-ಬದುಕು, ಧ್ಯೇಯ-ಧೋರಣೆ, ಸಿದ್ಧಿ-ಸಾಧನೆಗಳನ್ನು ಕುರಿತು ತಮ್ಮ ಪ್ರಬಂಧದಲ್ಲಿ ತಿಳಿಸಿದ್ದಾರೆ. ಗೌಡರು ಹುಟ್ಟಿದಂದಿನಿಂದ ಸಾಯುವವರೆಗೆ ನಡೆದು ಬಂದ ದಾರಿಯನ್ನು ಹೇಳುತ್ತಾ ಅವರು ಜಾನಪದ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ತಮ್ಮ ಸಂಶೋಧನೆಯಲ್ಲಿ ತಿಳಿಸಿದ್ದಾರೆ.

ಕಿಟಲ್ ಕಲಾ ಮಹಾವಿದ್ಯಾಲಯ ಧಾರವಾಡದ ರೇಖಾ ಜೋಗುಳ ಎಂಬುವವರು 'ಧಾರವಾಡ ಜಿಲ್ಲೆಯ ಜನಪದ ಕರಕುಶಲ ಕಲೆಗಳು' ಎಂಬ ವಿಷಯದಲ್ಲಿ ಸಂಶೋಧನೆ ಕೈಗೊಂಡು ಜಾನಪದ ಲೋಕದಲ್ಲಿರುವ ಜನಪದ ಕರಕುಶಲ ಕಲೆಗಳನ್ನು ತಮ್ಮ ಸಂಶೋಧನೆಗೆ ಬಳಸಿಕೊಂಡಿದ್ದಾರೆ. ಇವರು ತಮ್ಮ ಸಂಶೋಧನೆಯಲ್ಲಿ ಕರಕುಶಲ ಕಲೆಗಳ ಮೇಲೆ ಆಧುನಿಕತೆ ಹೇಗೆ ಪ್ರಭಾವ ಬೀರಿದೆ, ಅವುಗಳು ಹೇಗೆ ನಶಿಸುತ್ತಿವೆ, ಈ ಕಲೆಗಳನ್ನು ಉಳಿಸಿ ಬೆಳೆಸಲು ನಾವು ಯಾವ ಪ್ರಯತ್ನ ಮಾಡಬೇಕು ಎಂಬುದನ್ನು ತಮ್ಮ ಪ್ರಬಂಧದಲ್ಲಿ ತಿಳಿಸಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದ ಚಾಮರಾಜು ಬಿ. ಎಂಬುವವರು 'ಸಮಕಾಲೀನ ಕಲೆಯಲ್ಲಿ ತೊಗಲುಗೊಂಬೆ ಚಿತ್ರಕಲೆಯ ಒಂದು ಕಿರುಪ್ರಬಂಧ' ಎಂಬ ವಿಷಯದಲ್ಲಿ ಸಂಶೋಧನೆ ಕೈಗೊಂಡು ಜನಪದ ಕಲೆಗಳಲ್ಲಿ ಅತೀ ಪ್ರಾಚೀನ ಮತ್ತು ಪ್ರಸಿದ್ಧವಾದುದ್ದು ತೊಗಲುಗೊಂಬೆ. ಈ ತೊಗಲುಗೊಂಬೆಯ ಚಿತ್ರಕಲೆಗಳು ಇವತ್ತಿಗೂ ಹೇಗೆ ತಮ್ಮ ಪಾತ್ರವನ್ನು ಉಳಿಸಿಕೊಂಡು ಬಂದಿವೆ ಎಂಬುದನ್ನು ತಿಳಿಸಲಾಗಿದೆ. ಸಮಕಾಲೀನ ಸಂದರ್ಭದಲ್ಲಿ ಈ ಚಿತ್ರಕಲೆಗಳು ಎಷ್ಟು ಪ್ರಯೋಜನ ಹಾಗೂ ಎಷ್ಟು ಅಪ್ರಯೋಜನವಾಗುತ್ತಿವೆ ಎಂಬುದನ್ನು ಹೇಳುವುದರ ಮುಖಾಂತರ ಇಂತಹ ಜನಪದ

ಚಿತ್ರಕಲೆಗಳನ್ನು ಶೇಖರಿಸಿ, ಸಂರಕ್ಷಿಸಿ ಬಳಕೆ ಮಾಡುವುದು ನಮ್ಮೆಲ್ಲರ ಕರ್ತವ್ಯ ಎಂಬುದನ್ನು ಪ್ರಬಂಧದಲ್ಲಿ ಹೇಳಿದ್ದಾರೆ.

**ಅಧ್ಯಯನದ ಉದ್ದೇಶಗಳು**

- ಜಾನಪದ ಲೋಕದ ಐತಿಹಾಸಿಕ ಮಹತ್ವವನ್ನು ತಿಳಿಯುವುದು.
- ಜಾನಪದ ಲೋಕದ ಶೈಕ್ಷಣಿಕ ಚಟುವಟಿಕೆಗಳನ್ನು ತಿಳಿಯುವುದು.
- ಜಾನಪದ ಲೋಕ ಇತರೆ ಜನಪದ ಕಲೆಗಳೊಂದಿಗೆ ಹೊಂದಿರುವ ಸಂಬಂಧವನ್ನು ಅರಿಯುವುದು.
- ಜಾನಪದ ಲೋಕದಲ್ಲಿ ಸಂಗ್ರಹಿಸಿರುವ ಜಾನಪದ ವಸ್ತುಸಂಗ್ರಹಗಳ ಬಗ್ಗೆ ತಿಳಿಯುವುದು.
- ಜಾನಪದ ಲೋಕ ಇತರೆ ಸಂಘ-ಸಂಸ್ಥೆಗಳೊಂದಿಗೆ ಯಾವ ರೀತಿ ಸಂಬಂಧ ಹೊಂದಿದೆ ಎಂಬುದನ್ನು ನೋಡುವುದು.
- ಜಾನಪದ ಲೋಕದ ಹಾಗೂ ಎಚ್.ಎಲ್. ನಾಗೇಗೌಡರ ಸಂಬಂಧವನ್ನು ತಿಳಿಯುವುದು.
- ಪ್ರಸ್ತುತತೆಯಲ್ಲಿ ಜಾನಪದ ಲೋಕ ಹೇಗೆ ಕಾರ್ಯಚಟುವಟಿಕೆಗಳನ್ನು ನಿರ್ವಹಿಸುತ್ತಿದೆ ಎಂಬುದನ್ನು ತಿಳಿಯುವುದು.
- ಜಾನಪದ ಲೋಕ ಹೇಗೆ ಗ್ರಾಮೀಣ ಸಾಂಸ್ಕೃತಿಕ ಕಲಾಕೇಂದ್ರವಾಗಿ ಕಾರ್ಯಕ್ರಮಗಳನ್ನು ನಡೆಸುತ್ತಿದೆ ಎಂಬುದನ್ನು ತಿಳಿದುಕೊಳ್ಳುವುದು.
- ಸಂಶೋಧನಾ ಕೇಂದ್ರಗಳಾಗಿ ವಸ್ತುಸಂಗ್ರಹಾಲಯಗಳು ಹೇಗೆ ಕಾರ್ಯನಿರ್ವಹಿಸುತ್ತಿವೆ ಎಂಬುದನ್ನು ತಿಳಿಯುವುದು.

ಒಟ್ಟಾರೆ ಜಾನಪದ ಲೋಕಕ್ಕೆ ಸಂಬಂಧಿಸಿದಂತೆ ವಿವಿಧ ಆಯಾಮದಲ್ಲಿ ಅರ್ಥೈಸುವುದು, ಆ ಮೂಲಕ ಲೋಕದ ಬಗ್ಗೆ ಸಮಗ್ರ ಮಾಹಿತಿಯನ್ನು ತಿಳಿಯುವುದು ಅಧ್ಯಯನದ ಪ್ರಮುಖ ಉದ್ದೇಶ ವಾಗಿದೆ.

**ಪರಿಶೋಧಿಸಬೇಕಾದ ಸಮಸ್ಯೆಗಳು**

- ಜಾನಪದ ಲೋಕದ ಜನಪದ ಕಲಾ ಪ್ರದರ್ಶನಗಳನ್ನು ಅರಿಯುವುದು.
- ಜಾನಪದ ಕಲೆಗಳು ಏಕೆ ನಶಿಸುತ್ತಿವೆ.
- ಜಾನಪದ ವಸ್ತುಗಳು ನಶಿಸಲು ಆಧುನಿಕತೆ ಹೇಗೆ ಪ್ರಭಾವ ಬೀರಿದೆ.
- ಜನರ ಆಚರಣೆಗಳಲ್ಲಿ ಜನಪದ ವಸ್ತುಗಳು ಕಡಿಮೆ ಆಗಲು ಕಾರಣಗಳೇನು?

• ಜಾನಪದ ಲೋಕದಲ್ಲಿ ಸಂಗ್ರಹಿಸಿರುವ ಜನಪದ ವಸ್ತುಗಳು ಗ್ರಾಮೀಣ ಜನರಿಗೆ ಹೇಗೆ ಪ್ರಭಾವ ಬೀರುತ್ತಿವೆ.

• ಜಾನಪದ ಲೋಕ ಹೇಗೆ ಜಾನಪದ ಪ್ರಪಂಚದಲ್ಲಿ ಪ್ರಾಮುಖ್ಯತೆ ಪಡೆದಿದೆ.

• ಪ್ರಸ್ತುತವಾಗಿ ಜನಪದ ಕಲೆಗಳು ಯಾವ ರೀತಿ ಕಾರ್ಯನಿರ್ವಹಿಸುತ್ತಿವೆ.

**ಅಧ್ಯಯನದ ಪ್ರಮೇಯಗಳು**

• ಜನಪದ ಕಲೆಗಳು ನಿರ್ಲಕ್ಷತೆಗೆ ಒಳಗಾಗಿವೆ.

• ಗ್ರಾಮೀಣ ಜನರು ಆಧುನಿಕತೆಯ ಪ್ರಭಾವದಿಂದ ಇವುಗಳಿಗೆ ಹೆಚ್ಚಿನ ಮಹತ್ವ ನೀಡುತ್ತಿಲ್ಲ.

• ಜನಪದ ವಸ್ತುಗಳ ಬದಲಿಗೆ ಪ್ಲಾಸ್ಟಿಕ್ ಮತ್ತು ತಾಂತ್ರಿಕ ಉಪಕರಣಗಳನ್ನು ಜನರು ಬಳಸುತ್ತಿದ್ದಾರೆ.

• ಜನಪದ ಆಚರಣೆಗಳು ಕ್ಷೀಣಿಸುತ್ತಾ ಬಂದಿವೆ.

• ಜಾನಪದ ಶೈಕ್ಷಣಿಕ ಕಾರ್ಯಚಟುವಟಿಕೆಗಳು ಅಷ್ಟಾಗಿ ಕಾರ್ಯ ನಿರ್ವಹಿಸುತ್ತಿಲ್ಲ.

• ಜನಪದ ವಸ್ತು ಹಾಗೂ ಕಲೆಗಳು ಕೇವಲ ಅನಕ್ಷರಸ್ಥರ, ಬುಡಕಟ್ಟು ಜನರ, ಅವಿದ್ಯಾವಂತರ, ಗ್ರಾಮೀಣ ಜನರಿಗೆ ಸಂಬಂಧಿಸಿದ ಚಟುವಟಿಕೆಗಳು ಎಂಬುದಾಗಿದೆ.

**ಅಧ್ಯಯನದ ವಿಧಾನಗಳು**

ಜಾನಪದ ಲೋಕದ ಬಗ್ಗೆ ಇದುವರೆಗೆ ಬೆರಳೆಣಿಕೆಯಷ್ಟು ಅಧ್ಯಯನಗಳು ಮಾತ್ರ ನಡೆದಿವೆ ಹಾಗೂ ಪ್ರಸ್ತುತ ಅಧ್ಯಯನದ ದೃಷ್ಟಿಕೋನ ವಿಭಿನ್ನವಾಗಿದೆ. ಅಂದರೆ ಪುರಾತನ ಕಾಲದಿಂದಲೂ ನಮ್ಮ ಹಿಂದಿನ ಜನರು ಯಾವ ಯಾವ ವಸ್ತುಗಳನ್ನು ಬಳಸುತ್ತಿದ್ದರು, ಯಾವ ಆಚರಣೆಗಳನ್ನು ಮಾಡುತ್ತಿದ್ದರು, ಯಾವ ರೀತಿಯ ಶೈಕ್ಷಣಿಕ ಚಟುವಟಿಕೆಗಳು, ಗೋಷ್ಠಿಗಳು, ಶಿಬಿರಗಳು, ವೇಷ-ಭೂಷಣಗಳು, ಪ್ರದರ್ಶನ, ಕಲೆಗಳು ಮುಂತಾದ ಜಾನಪದೀಯ ಕಾರ್ಯಚಟುವಟಿಕೆಗಳ ಮಹತ್ವವನ್ನು ತಿಳಿಯುವುದರ ಜೊತೆಗೆ ಇವುಗಳನ್ನು ಉಳಿಸಿ ಬೆಳೆಸಲು ಜಾನಪದ ಲೋಕವು ಯಾವ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಇವುಗಳನ್ನು ಸಂರಕ್ಷಣೆ ಮಾಡುವಲ್ಲಿ ನಮ್ಮ ಪಾತ್ರ ಏನು ಎಂಬುದನ್ನು ಈ ಅಧ್ಯಯನದಿಂದ ತಿಳಿಯಬಹುದು.

**ಪ್ರಶ್ನಾವಳಿ :** ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಸೂಕ್ತ ಪ್ರಶ್ನಾವಳಿಯನ್ನು ಸಿದ್ಧಪಡಿಸಿಕೊಂಡು ಆ ಮೂಲಕ ಜಾನಪದ ಲೋಕದಲ್ಲಿರುವ ಸಿಬ್ಬಂದಿ ಹಾಗೂ ನೌಕರಿ ವರ್ಗದವರಿಂದ ಮುಖಾಮುಖಿ ಭೇಟಿ ಮಾಡಿ ಮಾಹಿತಿ ಸಂಗ್ರಹಣೆ ಮಾಡುವುದು.

**ಅವಲೋಕನ :** ಜಾನಪದ ಲೋಕದ ಬಗ್ಗೆ ತಿಳಿದುಕೊಳ್ಳಲು ನೇರ ಅವಲೋಕನದ ಮುಖಾಂತರ ಅಲ್ಲಿರುವ ಸಿಬ್ಬಂದಿಯವರಿಂದ ಜನಪದ ಕಲೆ, ವಸ್ತು, ಕಮ್ಮಟ, ಶಿಬಿರಗಳು, ಶಿಕ್ಷಣ, ಪ್ರದರ್ಶನಗಳು

ಹೀಗೆ ಅವಲೋಕನದ ಮುಖಾಂತರ ಮಾಹಿತಿ ಪಡೆಯುವುದು. ಇದರಿಂದ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ನೈಜ ಚಿತ್ರಣವನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತದೆ.

**ದತ್ತಾಂಶ ಸಂಗ್ರಹಣೆ :** ಈ ಹಿಂದೆ ನಡೆದ ಅಧ್ಯಯನಗಳು ಯಾವ ದೃಷ್ಟಿಕೋನದಡಿ ಅಧ್ಯಯನ ನಡೆದಿವೆ ಎಂಬುದನ್ನು ಲೇಖನಗಳು, ಗ್ರಂಥಗಳು, ನಿಯತಕಾಲಿಕೆಗಳು, ಪತ್ರಿಕೆಗಳು, ಉಪನ್ಯಾಸ ಕಾರ್ಯಕ್ರಮಗಳು ಹಾಗೂ ವಿಚಾರ ಸಂಕಿರಣಗಳು ಮುಂತಾದವುಗಳಿಂದ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ದತ್ತಾಂಶಗಳ ಸಂಗ್ರಹಣೆ ಮಾಡಿ ಸೂಕ್ಷ್ಮ ವಿಶ್ಲೇಷಣೆಯ ಮೂಲಕ ಪ್ರಬಂಧವನ್ನು ಸಿದ್ಧಪಡಿಸುವುದು.

**ಸಂದರ್ಶನ ವಿಧಾನ :** ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಜನಪದ ಕಲೆ, ವಸ್ತು, ವಿಚಾರ, ಜಾನಪದ ಶಿಕ್ಷಣ, ಪ್ರದರ್ಶನಗಳು, ಕಮ್ಮಟಗಳು, ತರಬೇತಿ ಶಿಬಿರಗಳು ಮುಂತಾದವುಗಳ ಬಗ್ಗೆ ವಿವರಗಳನ್ನು ಸಂಗ್ರಹಿಸಲು ಅಲ್ಲಿರುವ ನೌಕರಿ ಸಿಬ್ಬಂದಿ ವರ್ಗದವರನ್ನು ನೇರ ಸಂದರ್ಶನದ ಮುಖಾಂತರ ಮಾಹಿತಿ ಪಡೆಯುವುದು. ಇದರಿಂದ ಹಿಂದಿನ ಕಾಲದಿಂದ ಹಿಡಿದು ಇತ್ತೀಚಿನವರೆಗೂ ಯಾವ ರೀತಿಯ ಜನಪದ ಕಲೆ, ಶಿಕ್ಷಣ, ಆಚರಣೆಗಳನ್ನು, ಉಡುಗೆ-ತೊಡುಗೆ ಮೊದಲಾದವುಗಳ ಬಗ್ಗೆ ತೌಲನಿಕವಾಗಿ ಅಧ್ಯಯನ ಮಾಡುವುದು. ಇದರಿಂದ ಈ ವಿಧಾನ ಅತಿ ಉಪಯುಕ್ತವಾಗುತ್ತದೆ.

**ಅಧ್ಯಯನದ ಸಾಧನಗಳು :** 'ಜಾನಪದ ಲೋಕ : ಸಂಕಥನ' ಎಂಬ ಅಧ್ಯಯನಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯ ಸಮಯದಲ್ಲಿ ಮೂಲಭೂತ ಸಾಧನಗಳಾದ ಕ್ಯಾಮರಾ, ಟೇಪ್‌ರೆಕಾರ್ಡರ್, ಲೇಖನ ಸಾಮಗ್ರಿಗಳು ಹಾಗೂ ಇತರ ಸಾಧನಗಳನ್ನು ಉಪಯೋಗಿಸಿಕೊಂಡು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಪಡೆಯುವುದು ಅಧ್ಯಯನದ ವಿಶಿಷ್ಟ ಅಂಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು 'ಜಾನಪದ ಲೋಕ : ಸಂಕಥನ' ಎಂಬ ಪ್ರಬಂಧಕ್ಕೆ ಸಂಬಂಧಿಸಿದಂತೆ ಅಧ್ಯಯನದ ಸ್ಪಷ್ಟತೆಗಾಗಿ ಅಧ್ಯಯನದ ವ್ಯಾಪ್ತಿಯನ್ನು ಕರ್ನಾಟಕ ರಾಜ್ಯದ ರಾಮನಗರ ಜಿಲ್ಲೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ರೂಪಿಸಿಕೊಂಡ ಕ್ಷೇತ್ರಾಧ್ಯಯನವು ರಾಮನಗರ ಜಿಲ್ಲೆಯ ರಾಮನಗರ ತಾಲ್ಲೂಕನ್ನು ಒಳಗೊಂಡಿದೆ. ಪ್ರಸ್ತುತ ಅಧ್ಯಯನವು ರಾಮನಗರ ತಾಲ್ಲೂಕಿನಲ್ಲಿ ಕಂಡು ಬರುತ್ತದೆ. ಈ ಜಾನಪದ ಲೋಕದ ಬಗ್ಗೆ ಮಾಹಿತಿ ಸಂಗ್ರಹಿಸಲು ಕ್ಷೇತ್ರಾಧ್ಯಯನವನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನವು ಈಗಾಗಲೇ ಜಾನಪದ ಲೋಕದ ಬಗ್ಗೆ ನಡೆದಿರುವ ಸಮೀಕ್ಷೆಗಳ ಮುಖಾಂತರ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

## ಅಧ್ಯಯನದ ಮಹತ್ವ

ಈ ಅಧ್ಯಯನದ ಮಹತ್ವವು ಅಳಿದು ಹೋಗುತ್ತಿರುವ ಪರಂಪರಾಗತ ವಸ್ತು-ವಿಶೇಷಗಳನ್ನು ಮುಂದಿನ ತಲೆಮಾರುಗಳ ಅರಿವಿಗಾಗಿ ಕಾಯ್ದಿಡಬೇಕು ಎಂಬ ಉದ್ದೇಶದಿಂದ ಹಾಗೂ ಆಧುನಿಕತೆಯ ಪರಿಣಾಮವಾಗಿ ಸಾಂಸ್ಕೃತಿಕ ಪರಂಪರೆಗಳು ಬಹಳ ಬೇಗ ಕಣ್ಮರೆಯಾಗುವಂತಹ ಸ್ಥಿತಿ ಉದ್ಭವಿಸಿತು.

ಈ ಪರಂಪರೆಯನ್ನು ಮುಂದಿನ ತಲೆಮಾರುಗಳಿಗೆ ಕಾಯ್ದಿಡಬೇಕು ಮತ್ತು ಸಾಂಸ್ಕೃತಿಕ ಪರಂಪರೆಯ ಬಗ್ಗೆ ನಮ್ಮ ಅಸಡ್ಡೆ, ಅಜ್ಞಾನ, ಅಂಧಶ್ರದ್ಧೆಗಳ ಫಲವಾಗಿ ಅಮೂಲ್ಯವಾದ ವಸ್ತು-ವಿಶೇಷಗಳು ನಮ್ಮ ಕೈಗೆ ಸಿಗದಂತಾಗುತ್ತಿವೆ, ಅವುಗಳನ್ನು ಸಂರಕ್ಷಿಸಬೇಕು ಎಂಬ ಉದ್ದೇಶದಿಂದ ಹುಟ್ಟಿಕೊಂಡ ಸಂಸ್ಥೆಯೇ ಜಾನಪದ ಲೋಕ.[೬]

ಇದರ ನಿರ್ಮಾತೃ ಜಾನಪದ ದಿಗ್ಗಜ, ನಾಡೋಜ ಪ್ರಶಸ್ತಿ ವಿಜೇತ, ಹಿರಿಯ ಉನ್ನತ ಅಧಿಕಾರಿಯಾದ ಡಾ. ಎಚ್.ಎಲ್. ನಾಗೇಗೌಡರು. ಮೊದಲಿನಿಂದಲೂ ಜಾನಪದದಲ್ಲಿ ಅಪಾರ ಆಸಕ್ತಿ ಹೊಂದಿದ್ದ ಇವರು ಮರೆಯಾಗುತ್ತಿರುವ ಜನಪದ ಕಲೆ, ಪ್ರದರ್ಶನ, ಶಿಕ್ಷಣ, ಜಾನಪದ ವಸ್ತುಗಳು, ಕಾರ್ಯ ಚಟುವಟಿಕೆಗಳು ಮುಂತಾದವುಗಳನ್ನು ಶೇಖರಿಸಿ, ಸಂರಕ್ಷಿಸಿ, ಆಚರಿಸುವ ಉದ್ದೇಶದಿಂದ ಈ ಸಂಸ್ಥೆಯನ್ನು ಹುಟ್ಟು ಹಾಕಿದರು.

ಪುರಾತನ ಕಾಲದಿಂದಲೂ ಮನುಷ್ಯ ತನ್ನ ಅಗತ್ಯಕ್ಕೆ ಬೇಕಾದ ವಸ್ತುಗಳನ್ನು ಸೃಷ್ಟಿಸಿಕೊಳ್ಳುತ್ತಾ ಬಂದಿದ್ದಾನೆ. ಅಂದರೆ ಕೃಷಿ ಉಪಕರಣಗಳು, ಉಡುಗೆ-ತೊಡುಗೆ, ಒಡವೆಗಳು, ಆಯುಧಗಳು, ಮಕ್ಕಳ ಆಟಿಕೆಯ ವಸ್ತುಗಳು, ವೃತ್ತಿ ಸಾಧನ ಸಲಕರಣೆಗಳು, ಪೂಜಾವಸ್ತುಗಳು, ಗೊಂಬೆಗಳು, ಮದುವೆ ಸಲಕರಣೆಗಳು, ವಿಗ್ರಹಗಳು ಇತ್ಯಾದಿಯಾಗಿ ಮನುಷ್ಯ ಸೃಷ್ಟಿಸಿದ ವಸ್ತುಗಳು ಪರಂಪರೆಯ ಮುದ್ರೆ ಪಡೆದಿರುತ್ತವೆ. ಕಾಲಕ್ಕೆ ತಕ್ಕಂತೆ ಇವುಗಳ ತಯಾರಿಕೆ, ಬಳಸುವ ಸಾಮಗ್ರಿ ಹಾಗೂ ರೂಪ ವಿನ್ಯಾಸಗಳಲ್ಲಿ ಮಾರ್ಪಾಟುಗಳಾಗಬಹುದು. ಎಷ್ಟೋ ವಸ್ತುಗಳು ಉಪಯೋಗವಿಲ್ಲದವೂ ಆಗಬಹುದು. ಇಂತಹ ಎಲ್ಲಾ ವಸ್ತು ವೈಶಿಷ್ಟ್ಯಗಳನ್ನು ಸಂಗ್ರಹಿಸುವುದು ಜಾನಪದ ಲೋಕದ ಬಹುಮುಖ್ಯ ಕಾರ್ಯವಾಗಿದೆ.

ಒಂದು ನಿರ್ದಿಷ್ಟ ಪ್ರದೇಶ, ಜನವರ್ಗಗಳ ಸಂಸ್ಕೃತಿಯನ್ನು ತಿಳಿಯುವುದಕ್ಕೆ ಜಾನಪದ ಲೋಕವು ನೆರವಾಗುತ್ತದೆ. ಇಲ್ಲಿ ಸಂಗ್ರಹಗೊಳ್ಳುವ ಅನೇಕ ವಸ್ತುಗಳು ಮಾನವನ ಬದುಕಿನ ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಸೃಷ್ಟಿಯಾದಂತವು ಮತ್ತು ಬಳಕೆಯಾದಂತವು.[೭]

ಆ ಕಾಲದ ಸಂಸ್ಕೃತಿಯನ್ನು ಅರಿತುಕೊಳ್ಳುವುದಕ್ಕೆ ಈ ಸಂಸ್ಥೆ ಉಪಯುಕ್ತವಾಗಿದೆ. ಇತ್ತೀಚೆಗೆ ಆಧುನಿಕತೆಯ ಪರಿಣಾಮವಾಗಿ ವಿದ್ಯುತ್ ಚಾಲಿತ ಗಿರಣಿಗಳು ಬಂದ ನಂತರ ಬೀಸುವ ಕಲ್ಲು, ಒನಕೆ, ಗಾಣ, ಒರಳು ತಮ್ಮ ಉಪಯೋಗ ಕಳೆದುಕೊಳ್ಳುತ್ತಿವೆ. ನೀಲಗಾರರು, ದೊಂಬಿದಾಸರು, ಚೌಡಿಕೆಯವರು, ಕಿನ್ನರಿ ಜೋಗಿಗಳು ಮುಂತಾದ ವೃತ್ತಿಗಾಯಕರ ಪರಂಪರೆಗಳಿಗೆ ಈಗ ಮಾನ್ಯತೆ ಇಲ್ಲವಾದ್ದರಿಂದ ಅವರ ವಾದ್ಯಗಳು, ವೇಷ-ಭೂಷಣಗಳು ಕಣ್ಮರೆ ಆಗುತ್ತಿವೆ. ಇಂಥವರ ಪರಂಪರೆಗಳ ಬಗ್ಗೆ ಅಧ್ಯಯನ ಮಾಡಲು ಪ್ರಸ್ತುತ ಅಧ್ಯಯನವು ಅಧಿಕೃತ ಮಾಹಿತಿ ಒದಗಿಸಬಲ್ಲದು. ಇಲ್ಲಿ ಸಂಗ್ರಹಗೊಂಡಿರುವ ಅತ್ಯಂತ ಕನಿಷ್ಟ ವಸ್ತುವೂ ಕೂಡ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ.

ಪ್ರಸ್ತುತ ಸಂದರ್ಭದಲ್ಲಿ ಇಂತಹ ವೈಶಿಷ್ಟ್ಯತೆಯನ್ನು ಹೊಂದಿರುವ ಜಾನಪದ ಲೋಕದ ವಿವರವಾದ ಮಾಹಿತಿಯನ್ನು ಸಂಗ್ರಹಿಸುವುದು ಈ ಅಧ್ಯಯನದ ಮಹತ್ವವಾಗಿದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವು ಒಟ್ಟಾರೆ ಆರು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಅಧ್ಯಯನ ವಿಷಯಕ್ಕೆ ಪೂರಕವಾಗಿ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ. ಈ ಸಮೀಕ್ಷೆಯಲ್ಲಿ ಆ ಅಧ್ಯಯನಗಳ ಸ್ವರೂಪ ಹೇಳುವುದರ ಜೊತೆಗೆ ಪ್ರಸ್ತುತ ಅಧ್ಯಯನದ ಉದ್ದೇಶಗಳೇನು ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವವನ್ನು ಕುರಿತು ಹೇಳಲಾಗಿದೆ.

ಅಧ್ಯಾಯ ಎರಡರಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಕ್ಷೇತ್ರವಾದ ಜಾನಪದ ಲೋಕದ ಅರ್ಥ, ಸ್ವರೂಪವನ್ನು ವಿವರವಾಗಿ ತಿಳಿಸಲಾಗಿದೆ. ಜೊತೆಗೆ ಜಾನಪದ ಲೋಕದ ಹುಟ್ಟು ಯಾವಾಗ ಆಯಿತು, ಅದರ ಕಾರಣಕರ್ತರು ಯಾರು? ಯಾವ ಉದ್ದೇಶದಿಂದ ಈ ಸಂಸ್ಥೆ ಉದ್ಭವಿಸಿತು, ಅದು ಹೇಗೆ ಕಾಲಕ್ರಮೇಣ ಬೆಳವಣಿಗೆಯನ್ನು ಹೊಂದುತ್ತಾ ಬರುತ್ತಿದೆ ಎಂಬುದನ್ನು ಇಲ್ಲಿ ತಿಳಿಯಬಹುದು. ಜಾನಪದ ಲೋಕದ ರೂವಾರಿಗಳು ಆದಂತಹ ಡಾ. ಎಚ್.ಎಲ್. ನಾಗೇಗೌಡರು ಹಾಗೂ ಜಾನಪದ ಲೋಕದ ನಡುವಿನ ಸಂಬಂಧವನ್ನು ಕುರಿತು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಅಧ್ಯಾಯ ಮೂರರಲ್ಲಿ 'ಜಾನಪದ ಲೋಕ ಒಂದು ಸಂಗ್ರಹ' ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಜಾನಪದ ವಸ್ತುಸಂಗ್ರಹಾಲಯದಲ್ಲಿ ಜನಪದಕ್ಕೆ ಸಂಬಂಧಿಸಿದ ವಸ್ತು-ವಿಷಯಗಳು ಹೇಗೆ ಸಂಗ್ರಹಗೊಂಡು ಜಾನಪದ ಪ್ರಪಂಚಕ್ಕೆ ಪ್ರಭಾವ ಬೀರುತ್ತಿವೆ ಎಂಬುದನ್ನು ತಿಳಿಸಲಾಗಿದೆ. ಹಾಗೂ ಸಂಗ್ರಹಗೊಂಡಂತಹ ವಸ್ತುಗಳನ್ನು ಹೇಗೆ ವಿವಿಧ ವರ್ಗಗಳಾಗಿ ವರ್ಗೀಕರಿಸಿ ಪ್ರದರ್ಶಿಸಲಾಗಿದೆ ಎಂಬುದನ್ನು ಹೇಳಲಾಗಿದೆ. ಜೊತೆಗೆ ಅವುಗಳು ಹೇಗೆ ಜಾನಪದ ಲೋಕದಲ್ಲಿ ಪ್ರದರ್ಶನ ನೀಡುತ್ತಿವೆ ಮತ್ತು ಅವುಗಳನ್ನು ಸಂರಕ್ಷಣೆ ಮಾಡಲು ಯಾವ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ ಎಂಬುದನ್ನು ಈ ಅಧ್ಯಾಯದಲ್ಲಿ ತಿಳಿಯಲಾಗಿದೆ.

ಅಧ್ಯಾಯ ನಾಲ್ಕು 'ಜಾನಪದ ಲೋಕದ ಶೈಕ್ಷಣಿಕ ಕಾರ್ಯಕ್ರಮ'ಗಳಿಗೆ ಸಂಬಂಧಿಸಿದ್ದು. ಈ ಅಧ್ಯಾಯದಲ್ಲಿ ಶೈಕ್ಷಣಿಕ ವಿಷಯಗಳಾದ ಜಾನಪದ ಮಹಾವಿದ್ಯಾಲಯ ಇದರ ಕೆಲಸ ಕಾರ್ಯಗಳು, ಜಾನಪದ ಶಿಕ್ಷಣದ ಬಗ್ಗೆ ತಿಳಿಯುವುದು. ಜನಪದ ಕಲಾಕೇಂದ್ರದಲ್ಲಿ ವಿವಿಧ ಜನಪದ ಕಲೆಗಳು ಯಾವುವು? ಆ ಕಲೆಗಳು ಹೇಗೆ ಪ್ರದರ್ಶನ ನೀಡುತ್ತಿವೆ, ಇದರಿಂದ ಗ್ರಾಮೀಣ ಜನರ ಮೇಲೆ ಯಾವ ಪ್ರಭಾವ ಬೀರಿದೆ ಎಂಬುದನ್ನು ಅರಿಯಬಹುದು. ಜಾನಪದ ಸಂಶೋಧನಾ ಕೇಂದ್ರವಾಗಿ ಜಾನಪದ ಲೋಕ ಹೇಗೆ ಸಂಶೋಧನಾ ಕೆಲಸದಲ್ಲಿ ನಿರತವಾಗಿದೆ ಎಂಬುದನ್ನು ಗುರುತಿಸುವುದರ ಜೊತೆಗೆ ಜಾನಪದ ಲೋಕದಲ್ಲಿ ನಡೆಯುವ ಕಮ್ಮಟಗಳು ಹೇಗೆ ನಡೆಯುತ್ತವೆ, ಈ ಕಮ್ಮಟದಲ್ಲಿ ಯಾವ ವಿಷಯವನ್ನು ಕುರಿತು ಚರ್ಚಿಸುತ್ತಾರೆ, ಅದರಿಂದ ಯಾವ ಪ್ರಯೋಜನವಾಗುತ್ತಿದೆ ಎಂಬುದನ್ನು ತಿಳಿಯಲಾಗಿದೆ ಮತ್ತು ಅಲ್ಲಿ ನಡೆಯುವ ಜಾನಪದಕ್ಕೆ ಸಂಬಂಧಿಸಿದ ವಿಚಾರ ಸಂಕಿರಣಗಳು ಹಾಗೂ

ತರಬೇತಿ ಶಿಬಿರಗಳು ಜಾನಪದದ ಮೇಲೆ ಹೇಗೆ ಪ್ರಭಾವ ಬೀರುತ್ತಿವೆ, ಈ ಚರ್ಚೆ, ಶಿಬಿರಗಳಿಂದ ಜನರಿಗೆ ಪ್ರಯೋಜನವಾಗುತ್ತಿದೆಯೆ? ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ 'ಸಮಕಾಲೀನ ಸಂದರ್ಭ ಮತ್ತು ಜಾನಪದ ಲೋಕ'ವನ್ನು ಕುರಿತು ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನವು ಸಮಕಾಲೀನ ಸಂದರ್ಭದಲ್ಲಿ ಜಾನಪದ ಲೋಕ ಹೇಗೆ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದೆ ಎಂಬುದನ್ನು ತಿಳಿಯುವುದು. ಇವತ್ತಿನ ಅಧುನಿಕ ಯುಗದಲ್ಲಿ ಜಾನಪದ ಲೋಕ ಹೇಗೆ ನಗರ ಪ್ರದೇಶದ ಹಾಗೂ ಗ್ರಾಮೀಣ ಜನರಿಗೆ ಪ್ರಯೋಜನವಾಗುತ್ತಿದೆ ಎಂಬುದನ್ನು ಗುರುತಿಸುವುದು.

ಇವತ್ತಿನ ಆಧುನಿಕ ಯುಗದಲ್ಲಿ ಜಾನಪದ ವಸ್ತುಗಳು, ಕಲೆಗಳು, ಶಿಕ್ಷಣ, ಸಂಗೀತ, ನೃತ್ಯ, ಪ್ರದರ್ಶನಗಳು ನಾಶವಾಗಲು ಕಾರಣವೇನು? ಇವುಗಳ ಮೇಲೆ ಆಧುನಿಕತೆ ಹೇಗೆ ಪ್ರಭಾವ ಬೀರಿದೆ? ಇದರಿಂದ ಎಷ್ಟು ಪ್ರಯೋಜನ ಹಾಗೂ ಎಷ್ಟು ಅಪ್ರಯೋಜನವಾಗುತ್ತಿದೆ ಎಂಬುದನ್ನು ಕುರಿತು ಹೇಳ ಲಾಗಿದೆ. ಈ ಕಲೆ ಪ್ರದರ್ಶನಗಳನ್ನು ಉಳಿಸಿ ಬೆಳೆಸಿಕೊಳ್ಳಲು ನಾವು ಯಾವ ಅಂಶಗಳನ್ನು ಆಧರಿಸ ಬೇಕು ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಅಧ್ಯಾಯ ಆರು ಉಪಸಂಹಾರದಲ್ಲಿ ಪ್ರಸ್ತುತ ಅಧ್ಯಯನವು ಹೇಗೆ ಜಾನಪದ ವಸ್ತು ಸಂಗ್ರಹಾಲಯವಾಗಿ, ಜಾನಪದ ಮಹಾವಿದ್ಯಾಲಯವಾಗಿ, ಗ್ರಾಮೀಣ ಸಾಂಸ್ಕೃತಿಕ ಕಲಾಕೇಂದ್ರವಾಗಿ ರೂಪುಗೊಂಡಿದೆ ಎಂಬುದನ್ನು ಹೇಳುವುದರ ಜೊತೆಗೆ ಅಧ್ಯಯನದ ಸಂದರ್ಭದಲ್ಲಿ ಎದುರಾದ ದ್ವಂದ್ವಗಳನ್ನು ಹೇಳುತ್ತಲೇ, ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಮತ್ತು ಕೆಲವು ಸಲಹೆಗಳನ್ನು ನೀಡುವ ಪ್ರಯತ್ನವನ್ನು ಮಾಡಲಾಗಿದೆ.

**ಟಿಪ್ಪಣಿಗಳು**

೧. ಪ್ರೊ. ಎ.ವಿ. ನಾವಡ, ೨೦೦೧, **ಜಾನಪದ ಅಧ್ಯಯನ-ಸಮಕಾಲೀನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ಪು. ೯೪.

೨. ಅದೇ....., ಪು. ೯೫.

೩. ಎಚ್.ಎಲ್. ನಾಗೇಗೌಡ, ೨೦೦೩, **ಜಾನಪದ ಲೋಕ,** ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪತ್ರಿಕಾ ವರದಿ.

೪. ಡಾ. ಚಕ್ಕರೆ ಶಿವಶಂಕರ್, ೨೦೦೧, **ನಾಗಸಂಪದ,** ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೧೧.

೫. ಅದೇ......, ಪು. ೧೨.

೬. ಪ್ರೊ. ಡಿ. ಲಿಂಗಯ್ಯ, ೨೦೦೬, **ಜಾನಪದ ಸ್ವರೂಪ ಮತ್ತು ಸಾಹಿತ್ಯ**, ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್ ಪ್ರಿಂಟರ್ಸ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೨೧.

೭. ಅದೇ....., ಪು. ೧೨೨.

• • •

# ಅಧ್ಯಾಯ ೨

## ಜಾನಪದ ಲೋಕ : ಅರ್ಥ, ಸ್ವರೂಪ, ಹುಟ್ಟು ಮತ್ತು ಬೆಳವಣಿಗೆ

**ಈ** ಅಧ್ಯಾಯವು ಜಾನಪದ ಲೋಕದ ಸ್ಥಳದ ಪರಿಚಯವನ್ನು ಹೇಳುತ್ತಲೇ, ಜಾನಪದ ಲೋಕ ಅರ್ಥ, ಅದರ ಸ್ವರೂಪ, ಹುಟ್ಟು ಮತ್ತು ಬೆಳವಣಿಗೆಯನ್ನು ಕುರಿತು ಚರ್ಚಿಸಲಾಗಿದೆ. ಜಾನಪದ ಲೋಕ ಎಲ್ಲಿದೆ, ಅದು ಯಾವಾಗ ಆರಂಭವಾಯಿತು, ಅದರ ನಿರ್ಮಾತೃ ಯಾರು, ಯಾವ ಉದ್ದೇಶದಿಂದ ಈ ಸಂಸ್ಥೆ ಉದ್ಭವಿಸಿತು ಎಂಬುದನ್ನು ಹೇಳುವುದರ ಜೊತೆಗೆ ಕಾಲಕ್ರಮೇಣ ಅದು ಹೇಗೆ ಬೆಳವಣಿಗೆಯನ್ನು ಹೊಂದುತ್ತಾ ಬರುತ್ತಿದೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ.

ಜಾನಪದ ಲೋಕದ ರೂವಾರಿಗಳು ಆದಂತದ ಜಾನಪದ ದಿಗ್ಗಜ, ನಾಡೋಜ ಪ್ರಶಸ್ತಿ ವಿಜೇತ ಹಾಗೂ ಹಿರಿಯ ಉನ್ನತ ಅಧಿಕಾರಿಯಾದಂತಹ ಡಾ. ಎಚ್.ಎಲ್. ನಾಗೇಗೌಡರು ಹಾಗೂ ಜಾನಪದ ಲೋಕದ ನಡುವಿನ ಸಂಬಂಧಗಳು ಮತ್ತು ಬೆಳವಣಿಗೆಯನ್ನು ಕುರಿತು ಇಲ್ಲಿ ತಿಳಿಸಲಾಗಿದೆ.

ಒಟ್ಟಾರೆ ಜಾನಪದ ಲೋಕ ಹೇಗೆ ಆರಂಭಗೊಂಡು ಅದು ತನ್ನ ಗಾತ್ರ, ಪಾತ್ರ, ಸೂತ್ರಗಳನ್ನು ಹಿಗ್ಗಿಸಿಕೊಂಡು ಅಭಿವೃದ್ಧಿ ಪಥದಲ್ಲಿ ಸಾಗುತ್ತಿದೆ ಎಂಬುದನ್ನು ಈ ಅಧ್ಯಾಯದಿಂದ ತಿಳಿದುಕೊಳ್ಳ ಬಹುದಾಗಿದೆ.

### ಜಾನಪದ ಲೋಕ

ಜಾನಪದ ಸಂಸ್ಕೃತಿಯ ಸೌರಭವನ್ನು ಪಸರಿಸಲೆಂದು ಸ್ಥಾಪಿಸಲ್ಪಟ್ಟ ಕೇಂದ್ರವೇ ಈ ಜಾನಪದ ಲೋಕ. ಜನಪದರ ಬಾಳು-ಬದುಕು, ಕಲೆ-ಆಚರಣೆ, ಹಬ್ಬ-ಹರಿದಿನ, ಕುಣಿತ-ಮೆರೆತ, ಹಾಡು-ಪಾಡುಗಳ ಸಂಗ್ರಹ, ಸಂಶೋಧನೆ, ಪ್ರಸಾರ, ಜಾನಪದ ವಸ್ತುಗಳ ಸಂಗ್ರಹವೇ ಜಾನಪದ ಲೋಕದ ಗುರಿಯಾಗಿದೆ.

ಅಳಿದು ಹೋಗುತ್ತಿರುವ ಪರಂಪರಾಗತ ವಸ್ತು ವಿಶೇಷಗಳನ್ನು ಮುಂದಿನ ತಲೆಮಾರುಗಳ ಅರಿವಿ ಗಾಗಿ ಕಾಯ್ದಿಡಬೇಕು ಎಂಬ ಉದ್ದೇಶದಿಂದ ಹಾಗೂ ಆಧುನಿಕತೆಯ ಪರಿಣಾಮವಾಗಿ ಸಾಂಸ್ಕೃತಿಕ ಪರಂಪರೆಗಳು ಬಹಳ ಬೇಗ ಕಣ್ಮರೆಯಾಗುವಂತಹ ಸ್ಥಿತಿಯನ್ನು ತಪ್ಪಿಸಲು, ಈ ಪರಂಪರೆಯನ್ನು ಮುಂದಿನ ತಲೆಮಾರುಗಳಿಗೆ ಕಾಯ್ದಿಡಬೇಕು ಮತ್ತು ಸಾಂಸ್ಕೃತಿಕ ಪರಂಪರೆಯ ಬಗ್ಗೆ ನಮ್ಮ ಅಸಡ್ಡೆ.

ಅಜ್ಞಾನ, ಅಂಧಶ್ರದ್ಧೆಗಳ ಫಲವಾಗಿ ಅಮೂಲ್ಯವಾದ ವಸ್ತುವಿಶೇಷಗಳು ನಮ್ಮ ಕೈಗೆ ಸಿಗದಂತಾಗುತ್ತಿವೆ ಅವುಗಳನ್ನು ಸಂರಕ್ಷಿಸಬೇಕು ಎಂಬ ಉದ್ದೇಶದಿಂದ ಹುಟ್ಟಿಕೊಂಡ ಸಂಸ್ಥೆಯೇ ಜಾನಪದ ಲೋಕ.[೧] ಇದರ ನಿರ್ಮಾತೃ ಜಾನಪದ ದಿಗ್ಗಜ ಹಿರಿಯ ಉನ್ನತ ಅಧಿಕಾರಿಯಾದ ಡಾ. ಎಚ್.ಎಲ್. ನಾಗೇಗೌಡರು. ಮೊದಲಿನಿಂದಲೂ ಜಾನಪದದಲ್ಲಿ ಅಪಾರ ಆಸಕ್ತಿ ಹೊಂದಿದ್ದ ಇವರು ಮರೆಯಾಗುತ್ತಿರುವ ಜನಪದ ಕಲೆ, ಜನಪದ ವಸ್ತುಗಳು, ಜನಪದ ಕಲಾ ಪ್ರದರ್ಶನ, ಜನಪದ ಶಿಕ್ಷಣ, ಮುಂತಾದ ಜಾನಪದೀಯ ಚಟುವಟಿಕೆಗಳನ್ನು ಅಥವಾ ಅಂಶಗಳನ್ನು ಶೇಖರಿಸಿ, ಸಂರಕ್ಷಿಸಿ, ಆಚರಿಸುವ ಉದ್ದೇಶದಿಂದ ಈ ಸಂಸ್ಥೆಯನ್ನು ಹುಟ್ಟು ಹಾಕಿದರು.

**ಜಾನಪದ ಲೋಕದ ಸ್ವರೂಪ**

ಜಾನಪದ ಸಂಸ್ಕೃತಿಯ ಹಾಗೂ ಕಲೆಗಳ ಸಂವರ್ಧನೆಗಾಗಿ ಸಮಗ್ರ ಗ್ರಾಮೀಣ ಸಾಂಸ್ಕೃತಿಕ ಕೇಂದ್ರವೊಂದನ್ನು ರೂಪಿಸುವ ಎಚ್.ಎಲ್. ನಾಗೇಗೌಡರ ಹಂಬಲದ ಸಾಕಾರವೇ ಜಾನಪದ ಲೋಕ. ರಾಮನಗರದಿಂದ ಕೇವಲ ೩. ಕಿ.ಮೀ. ದೂರದಲ್ಲಿರುವ ೧೫ ಎಕರೆ ವಿಸ್ತೀರ್ಣದ ಹಲವು ವೈಶಿಷ್ಟ್ಯಗಳ ಸಂಗಮವಾದ ಜಾನಪದ ಲೋಕ ೧೯೯೪ನೇ ಮಾರ್ಚ್ ೧೨ರಂದು ರಾಷ್ಟ್ರದ ಜನತೆಗೆ ಸಮರ್ಪಿಸಲ್ಪಟ್ಟಿತು. ಈ ಜಾನಪದ ಲೋಕದ ಸ್ವರೂಪವನ್ನು ನೋಡುವುದಾದರೆ,

**ಮಹಾದ್ವಾರ :** ಜಾನಪದ ಲೋಕದ ಮಹತ್ವದ ಆಕರ್ಷಣೆಯೇ ಅದರ ಮಹಾದ್ವಾರ. ಇದು ಬೃಹದಾಕಾರದ ಕೊಂಬು ಕಹಳೆ ಹಾಗೂ ಹರಿಗೆಗಳಿಂದ ಅಲಂಕೃತವಾದ, ಇಪ್ಪತ್ತು ಅಡಿಗಳಷ್ಟು ವಿಶಾಲ ವಾದ ಮಹಾದ್ವಾರವಾಗಿದೆ. ದ್ವಾರದ ಎರಡೂ ಬೀದಿಯಲ್ಲಿ ಆಕಾಶಕ್ಕೆ ಚಾಚಿನಿಂತ ಇಪ್ಪತ್ತಾರು ಅಡಿ ಎತ್ತರದ ಹಿತ್ತಾಳೆಯ ನಂದಿಧ್ವಜಗಳು ಪ್ರೀತಿಯಿಂದ ಸ್ವಾಗತಿಸುತ್ತಿವೆ. ಇದು ಶೈವ ಮತ್ತು ವೈಷ್ಣವ ಸಂಪ್ರದಾಯಗಳೆರಡರ ಸಮ್ಮಿಲನ ಈ ಮಹದ್ವಾರದ ವೈಶಿಷ್ಟ್ಯವಾಗಿದೆ.

**ಲೋಕಮಾತಾ ಮಂದಿರ :** ಮಹಾದ್ವಾರದ ಎದುರಿಗೆ ಕಾಣುವುದೇ ಈ ಮಂದಿರವಾಗಿದೆ. ಇಲ್ಲಿ ದುಡಿಮೆಯೇ ಉಸಿರಾದ ಹಳ್ಳಿಗರ ಬದುಕಿನಲ್ಲಿ ಸೊಗಸು, ಸೊಬಗುಗಳಿಗೆ ಕೊರತೆಯಿಲ್ಲ. ಬಗೆ ಬಗೆಯ ಚಿತ್ತಾರ, ಚಿತ್ರಪಟಗಳು, ಗಿರಿಜನರು ಮತ್ತು ಗ್ರಾಮೀಣರ ಬಳಕೆಯ ವಿಶಿಷ್ಟ ವಸ್ತುಗಳು, ವಾಡೆ-ಗುಡಾಣಗಳು, ರೇಷ್ಮೆ ಮಗ್ಗ, ಒಳಮನೆ ವಸ್ತುಗಳು ಹಾಗೂ ಕರ್ನಾಟಕದ ಜನಪದ ಕಲೆಗಳ ಭೂಪಟ ಇಲ್ಲಿದೆ. ಎತ್ತು ಅಥವಾ ಕೋಣ ಕಟ್ಟಿ ಬೀಸುವ ಬಹುದೊಡ್ಡ ಕಲ್ಲು ಇದರ ಮುಂದಿದೆ.

**ಚಿತ್ರಕುಟೀರ :** ಲೋಕಮಾತಾ ಮಂದಿರದ ಬಲಭಾಗದ ಕಟ್ಟಡವೇ ಚಿತ್ರಕುಟೀರ. ಈ ಕುಟೀರದಲ್ಲಿ ಪ್ರದರ್ಶಿತಗೊಂಡಿರುವ ಆಕರ್ಷಕ ವರ್ಣಚಿತ್ರಗಳು ನಾಡಿನ ಹಬ್ಬ, ಕಲೆ, ಆಚರಣೆಗಳು, ಜಾತ್ರೆಗಳನ್ನು ನಮ್ಮ ಕಣ್ಣ ಮುಂದೆ ತಂದು ನಿಲ್ಲಿಸುತ್ತವೆ. ಕರ್ನಾಟಕ ಜಾನಪದ ಪರಿಷತ್ತಿನ ಸಂಸ್ಥಾಪಕ ಅಧ್ಯಕ್ಷರೂ ಜಾನಪದ ಲೋಕದ ರೂವಾರಿಗಳೂ ಆದ ಡಾ.ಎಚ್.ಎಲ್. ನಾಗೇಗೌಡರ ತಪಸ್ಸಿನೋಪಾದಿಯಲ್ಲಿ

ಕೈಗೊಂಡ ಧ್ವನಿಮುದ್ರಣ, ಚಿತ್ರೀಕರಣ, ವಸ್ತುಸಂಗ್ರಹ ಮೊದಲಾದ ಕಾರ್ಯಗಳ ಸಂದರ್ಭದ ಛಾಯಾ ಚಿತ್ರಗಳು ಹಾಗೂ ಅವರಿಗೆ ಸೇರಿದ ಅಮೂಲ್ಯ ವಸ್ತುಗಳು ಇಲ್ಲಿ ಪ್ರದರ್ಶಿತವಾಗಿವೆ.

**ಶಿಲ್ಪಮಾಳ :** ಈ ಶಿಲ್ಪಮಾಳದಲ್ಲಿ ಒಂದು ಸಾವಿರದ ಎರಡು ನೂರು ವರ್ಷಗಳಿಗೂ ಹಿಂದಿನ ವೀರಗಲ್ಲು, ಸತೀಕಲ್ಲುಗಳು, ತುರುಗೋಳ್, ಶಾಸನ, ರಥ, ಫಿರಂಗಿ ಮೊದಲಾದವುಗಳು ತಮ್ಮ ಗತಕಾಲದ ಚರಿತ್ರೆಯನ್ನು ಹೇಳುತ್ತಾ ಇಲ್ಲಿ ನಿಂತಿವೆ. ರಾಜಮಹಾರಾಜರುಗಳ ಕಾಲದ ಬೃಹದಾಕಾರದ ಕಲ್ಲಿನ ತೊಟ್ಟಿಗಳಿವೆ.

**ಲೋಕಮಹಲ್ :** ಜಾನಪದಕ್ಕೆ ಸಂಬಂಧಪಟ್ಟ ಎಲ್ಲಾ ಬಗೆಯ ಸುಮಾರು ೫೦೦೦ಕ್ಕೂ ಹೆಚ್ಚು ವಸ್ತುಗಳನ್ನು ಕಲಾತ್ಮಕವಾಗಿ ಹಾಗೂ ವೈಜ್ಞಾನಿಕವಾಗಿ ಇಲ್ಲಿ ಜೋಡಿಸಲಾಗಿದೆ. ಉದಾ:- ತೊಗಲು ಗೊಂಬೆಗಳು, ಸೂತ್ರದಗೊಂಬೆಗಳು, ಯಕ್ಷಗಾನದ ವೇಷಭೂಷಣಗಳು, ಜನಪದ ವಾದ್ಯಗಳು, ಒಡವೆ ವಸ್ತುಗಳು, ಆಯುಧಗಳು, ಮಕ್ಕಳ ಆಟಿಕೆಯ ವಸ್ತುಗಳು, ಮದುವೆಗೆ ಸಂಬಂಧಿಸಿದ ವಸ್ತುಗಳು, ದೇವರ ವಿಗ್ರಹಗಳು, ಅಡುಗೆ ಮನೆ ಉಪಕರಣಗಳು, ಪೂಜಾ ಸಾಮಗ್ರಿಗಳು, ಹಚ್ಚೆ-ಚಿತ್ತಾರಗಳು, ತಾಂಬೂಲದ ಸಲಕರಣೆಗಳು, ವಿವಿಧ ಬಗೆಯ ನಾಣ್ಯಗಳು, ಅಳತೆ ಸಾಧನಗಳು, ಓಲೆಗರಿ ಕಡತಗಳು, ವೃತ್ತಿ ಉಪಕರಣಗಳು, ಪೌರಾಣಿಕ ಗೊಂಬೆಗಳು, ಸೋಮ-ಹೆರಿಗೆಗಳು, ಮುಖವಾಡಗಳು, ಛಾಯಾಚಿತ್ರ ಮತ್ತು ವರ್ಣಚಿತ್ರಗಳು ಇನ್ನೂ ಮುಂತಾದವುಗಳನ್ನು ಇಲ್ಲಿ ಕಾಣಬಹುದಾಗಿದೆ.

**ಆಯಗಾರರ ಮಾಳ :** ಕಣ್ಮರೆಯಾಗುತ್ತಿರುವ ಹಳ್ಳಿಯ ಕಸಬುಗಳಾದ ಕುಂಬಾರಿಕೆ, ಕಮ್ಮಾರಿಕೆಯ ಉಪಕರಣಗಳು ಹಾಗೂ ಮರದ ಕಬ್ಬಿನ ಗಾಣ, ಎಣ್ಣೆಗಾಣ, ಕೊಟ್ಟಣ, ಬೇಸಾಯದ ಸಲಕರಣೆಗಳನ್ನು ಇಲ್ಲಿ ಕಾಣಬಹುದು.

**ದೊಡ್ಡಮನೆ :** ಜನಪದ ಕಲಾವಿದರು ತಂಗಲೆಂದೇ ನಿರ್ಮಿಸಿರುವ ತೊಟ್ಟಿಯ ಕಂಬಗಳನ್ನೊಳಗೊಂಡ ದೊಡ್ಡಮನೆ. ಇಲ್ಲಿ ಜನಪದಕ್ಕೆ ಸಂಬಂಧಿಸಿದಂತೆ ತರಬೇತಿ ಶಿಬಿರಗಳು, ಜಾನಪದ ಸಂಶೋಧನಾ ಕಮ್ಮಟಗಳು ಹಾಗೂ ವಿಚಾರ ಸಂಕಿರಣಗಳನ್ನು ನಿಯತವಾಗಿ ನಡೆಸಿಕೊಂಡು ಬರಲಾಗುತ್ತಿದೆ. ಜೊತೆಗೆ ಇಲ್ಲಿ ಮದುವೆ ಮುಂತಾದ ಸಾಂಪ್ರದಾಯಿಕ ಆಚರಣೆಗಳನ್ನು ಇಲ್ಲಿ ಮಾಡುತ್ತಾರೆ.

**ಬಯಲು ರಂಗಮಂದಿರ :** ಜನಪದ ನೃತ್ಯ-ನಾಟಕ, ಕಲಾ ಪ್ರದರ್ಶನಕ್ಕೆ ಮೀಸಲಾದ ಬಯಲು ರಂಗಮಂದಿರವಿದೆ. ಇದನ್ನು ಗ್ರೀಕ್ ಮಾದರಿಯಲ್ಲಿ ನಿರ್ಮಿಸಲಾಗಿದೆ. ಸುಮಾರು ೮೦೦-೧೦೦೦ ಮಂದಿ ಇಲ್ಲಿ ಕುಳಿತುಕೊಳ್ಳಬಹುದು.

**ದೇವಸ್ಥಾನ -** ಜಾನಪದ ಲೋಕವನ್ನು ವೀಕ್ಷಿಸಲೆಂದು ಬರುವವರನ್ನು ಹರಸಲೆಂದೇ ಇಲ್ಲಿ ನೆಲೆಯಾಗಿರುವ ಲೋಕ ಪ್ರಿಯ ಮಹಾಗಣಪತಿ ದೇವಸ್ಥಾನವಿದೆ.

ಮಕ್ಕಳ ಮನರಂಜನೆಗಾಗಿ ಎತ್ತಿನಗಾಡಿ ಸವಾರಿ, ಕುದುರೆ ಸವಾರಿ, ಆಟವಾಡಲು ಆಟದ ಮಾಳವಿದೆ. ಕರಕುಶಲ ಕಲಾವಿದರು ಈ ಲೋಕದಲ್ಲಿದ್ದುಕೊಂಡು ಕುಶಲ ವಸ್ತುಗಳನ್ನು ತಯಾರಿಸುತ್ತಿದ್ದಾರೆ.

ಡೊಳ್ಳುಕುಣಿತ, ಸುಗ್ಗಿ ಕುಣಿತ, ಕೋಲಾಟ, ಗೊರವರ ಕುಣಿತ, ಇವೇ ಮೊದಲಾದ ಪ್ರದರ್ಶಕ ಕಲೆಗಳಲ್ಲಿ ತರಬೇತಿ ನೀಡಿ ಜಾನಪದ ಲೋಕದ್ವೇ ಆದ ಕಲಾತಂಡಗಳನ್ನು ರೂಪಿಸಲಾಗಿದೆ.

**ಜಾನಪದ ಮಹಾವಿದ್ಯಾಲಯ :** ಬೆಂಗಳೂರು ವಿಶ್ವವಿದ್ಯಾಲಯದ ಸಂಶೋಧನೆಯ ಮಂಜೂರಾತಿ ಯೊಂದಿಗೆ ೧೯೯೫ರಲ್ಲಿ ಜಾನಪದ ಲೋಕದಲ್ಲಿ ಜಾನಪದ ಮಹಾವಿದ್ಯಾಲಯವನ್ನು ಪ್ರಾರಂಭಿಸಲಾಗಿದೆ. ಎಸ್.ಎಸ್.ಎಲ್.ಸಿ. ಪಾಸಾದ ವಿದ್ಯಾರ್ಥಿಗಳು ಜಾನಪದ ಸರ್ಟಿಫಿಕೇಟ್ ತರಗತಿಗಳಿಗೆ ಮತ್ತು ಪಿಯುಸಿ ಪಾಸಾದ ವಿದ್ಯಾರ್ಥಿಗಳು ಜಾನಪದ ಡಿಪ್ಲೊಮಾ ತರಗತಿಗಳಿಗೆ ಸೇರಲು ಜಾನಪದ ಮಹಾವಿದ್ಯಾಲಯದಲ್ಲಿ ಮುಕ್ತ ಅವಕಾಶವಿದೆ.[೨] ಇಲ್ಲಿ ಜಾನಪದ ಪಠ್ಯತತ್ವ ವಿಧಾನಗಳನ್ನು ಕಲಿಸುವುದರೊಂದಿಗೆ ಪಟ್ಟದ ಕುಣಿತ, ಸುಗ್ಗಿ ಕುಣಿತ, ಪೂಜಾ ಕುಣಿತ, ಡೊಳ್ಳಿನ ಕುಣಿತ, ತಮಟೆ ಬಾರಿಸುವುದು ಇವೇ ಮೊದಲಾದವುಗಳಲ್ಲಿ ತರಬೇತಿ ನೀಡಲಾಗುವುದು.

**ಜಾನಪದ ಸಂಶೋಧನಾ ಕೇಂದ್ರ :** ಬೆಂಗಳೂರು ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಜಾನಪದ ಸಂಶೋಧನಾ ಕೇಂದ್ರವನ್ನು ಜಾನಪದ ಲೋಕದಲ್ಲಿ ತೆರೆಯಲಾಗಿದೆ. ಜಾನಪದ ಕ್ಷೇತ್ರದಲ್ಲಿ ಎಂ.ಎ., ಎಂ.ಫಿಲ್., ಪಿಎಚ್.ಡಿ. ಪದವಿಗಾಗಿ ಸಂಶೋಧನೆ ನಡೆಸುತ್ತಿರುವ ಪದವೀಧರರು ಈ ಸಂಶೋಧನಾ ಕೇಂದ್ರದಲ್ಲಿ ಹೆಸರು ನೋಂದಾವಣೆ ಮಾಡಿಸಿಕೊಂಡಿದ್ದಾರೆ. ಕರ್ನಾಟಕ ಜಾನಪದದ ಬಗ್ಗೆ ಅಧ್ಯಯನ, ಸಂಶೋಧನೆ ಮತ್ತು ಮಾಹಿತಿ ಕೋರಿ ಬರುವವರಿಗೆ ಈ ಸಂಶೋಧನಾ ಕೇಂದ್ರವು ನೆರವು ನೀಡುತ್ತಿದೆ.[೩] ಜೊತೆಗೆ ಜಾನಪದಕ್ಕೆ ಮೀಸಲಾದ ಬೃಹತ್ ಗ್ರಂಥ ಭಂಡಾರವೂ ಇಲ್ಲಿದೆ. ಇವುಗಳ ಜೊತೆಗೆ ಬಾಳೆ ಎಲೆ ಉಪಾಹಾರ ಮಂದಿರ, ಶೌಚಾಲಯಗಳು, ಹಾಲಿನಕೇಂದ್ರ, ಹಣ್ಣು ತರಕಾರಿ ಮಳಿಗೆಗಳಿವೆ. ಜಾನಪದ ಲೋಕದ ಮಧ್ಯದಲ್ಲೊಂದು ಕೆರೆಯಿದೆ. ಮತ್ತೊಂದೆಡೆ ಕೊಳ, ವಿಹಾರಾರ್ಥಿಗಳಿಗೆ ವಿಶ್ರಾಂತಿ ತಾಣಗಳು, ಅಲ್ಲಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಇದೆ. ಎಸ್.ಟಿ.ಡಿ., ಐ.ಎಸ್.ಡಿ. ದೂರವಾಣಿ ಸೌಕರ್ಯವಿದೆ. ತಡೆರಹಿತ ಬಸ್ ಹೊರತು ಎಲ್ಲಾ ಬಸ್‌ಗಳು ಜಾನಪದ ಲೋಕದ ಬಳಿ ನಿಲ್ಲುತ್ತವೆ.

ಪ್ರತೀ ವರ್ಷ ಜಾನಪದ ಲೋಕದಲ್ಲಿ ಫೆಬ್ರವರಿ-ಮಾರ್ಚ್ ತಿಂಗಳಿನಲ್ಲಿ ಲೋಕೋತ್ಸವ ಕಾರ್ಯಕ್ರಮ. ಅಕ್ಟೋಬರ್ ತಿಂಗಳಿನಲ್ಲಿ ದಸರಾ ಉತ್ಸವ, ಜುಲೈ ತಿಂಗಳಿನಲ್ಲಿ ಗಾಳಿಪಟ ಉತ್ಸವಗಳನ್ನು ತಪ್ಪದೇ ಆಚರಿಸಲಾಗುತ್ತಿದೆ.

ಒಟ್ಟಿನಲ್ಲಿ ಜಾನಪದ ಲೋಕವು ವಿದ್ವಾಂಸರು, ಆಸಕ್ತರು, ಸಂಶೋಧಕರ ಪಾಲಿಗೆ ಅಮೂಲ್ಯವಾದ ಆಕರ ಜಗತ್ತು.

ಸಂಶೋಧಕರಿಗೆ ಸಹಸ್ರಾರು ಗ್ರಾಮೀಣ ವಸ್ತುಗಳು, ಧ್ವನಿ ಮುದ್ರಿಕೆಗಳು, ಉತ್ತಮ ಗ್ರಂಥ ಭಂಡಾರ, ವೀಡಿಯೋ ಚಿತ್ರೀಕರಣ ಮಾಹಿತಿ, ಪ್ರೇಕ್ಷಕರ ಸಲುವಾಗಿ ಜಾನಪದ ಕಲಾ ಮಹೋತ್ಸವಗಳು, ಆಸಕ್ತರಿಗೆ ಅಭಿರುಚಿ ಮೂಡಿಸುವ ಶಿಬಿರಗಳು, ಜನಪದ ಕಲೆಗಳ ತರಬೇತಿ ಶಿಬಿರಗಳು ಹೀಗೆ ನಿರಂತರ ಜಾನಪದೀಯ ಚಟುವಟಿಕೆಗಳ ಆಗರವಾಗಿರುವ ಜಾನಪದ ಲೋಕವು ಜಗತ್ತಿನ ಅತ್ಯುತ್ತಮ ಜಾನಪದ

ಕೇಂದ್ರಗಳಲ್ಲಿ ಒಂದಾಗಿದೆ. ಜಗತ್ತಿನ ಜಾನಪದ ಭೂಪಟದಲ್ಲಿ ಕರ್ನಾಟಕದ ಛಾಪನ್ನು ಮೂಡಿಸಿದ ಯಶಸ್ಸು ಡಾ.ಎಚ್.ಎಲ್. ನಾಗೇಗೌಡರದು.

**ಜಾನಪದ ಲೋಕ ಹುಟ್ಟು ಮತ್ತು ಬೆಳವಣಿಗೆ**

ಜಾನಪದ ಸಂಸ್ಕೃತಿಯ ಹಾಗೂ ಕಲೆಗಳ ಸಂವರ್ಧನೆಗಾಗಿ ಸಮಗ್ರ ಗ್ರಾಮೀಣ ಸಾಂಸ್ಕೃತಿಕ ಕೇಂದ್ರವೊಂದನ್ನು ರೂಪಿಸುವ ಡಾ. ಎಚ್.ಎಲ್. ನಾಗೇಗೌಡರ ಹಂಬಲದ ಸಾಕಾರವೇ ಜಾನಪದ ಲೋಕ.[೪] ರಾಮನಗರದಿಂದ ಕೇವಲ ಮೂರು ಕಿ.ಮೀ. ದೂರದಲ್ಲಿರುವ ಹದಿನೈದು ಎಕರೆ ವಿಸ್ತೀರ್ಣದ ಹಲವು ವೈಶಿಷ್ಟ್ಯಗಳ ಸಂಗಮವಾದ ಜಾನಪದ ಲೋಕ ೧೯೯೪ನೇ ಮಾರ್ಚ್ ೧೨ ರಂದು ರಾಷ್ಟ್ರದ ಜನತೆಗೆ ಸಮರ್ಪಿಸಲ್ಪಟ್ಟಿತು. ಪರಿಷತ್ತಿನ ಮಹಾಪೋಷಕರೂ ಜನಪದ ಕಲೆಗಳ ಆಶ್ರಯದಾತರೂ ಆಗಿರುವ ಆದಿಚುಂಚನಗಿರಿಯ ಶ್ರೀಶ್ರೀಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳವರು ಜಾನಪದ ಲೋಕದ ಉದ್ಘಾಟನೆಯನ್ನು ನೆರವೇರಿಸಿಕೊಟ್ಟಿದ್ದಾರೆ.

ಆಕರ್ಷಕವಾದ ಮಹಾದ್ವಾರ, ಬೀಸುವ ಕಲ್ಲಿನ ಅರ್ಧ ಪೂರ್ಣಲೋಕದ ಲಾಂಛನ, ಎತ್ತುಗಳಿಂದ ಎಳೆಸುವ ಅತಿ ದೊಡ್ಡದಾದ ಬೀಸುವ ಕಲ್ಲು, ಅಡಿಗೆ ಮನೆಯ ವಿವಿಧ ವಸ್ತುಗಳ ಸಂಗ್ರಹಾಲಯ ಲೋಕಮಾತಾ ಮಂದಿರ, ಚಿತ್ರದಲ್ಲೆ ಚಿತ್ತ ಸೆಳೆಯುವ ಚಿತ್ರಕುಟೀರ, ಸಾವಿರಾರು ಅದ್ಭುತ ವಸ್ತುಗಳ ವೈವಿಧ್ಯಮಯ ಸಂಗ್ರಹ ಶಾಲೆಯಾದ ಲೋಕಮಹಲ್, ವಿಶ್ರಾಂತಿ ಪುರುಷೋತ್ತಮ ಕುಟೀರ, ಕಲಾವಿದರಿಗಾಗಿ ಕಟ್ಟಿರುವ ದೊಡ್ಡ ಮನೆ, ಕಲ್ಲಿನಲ್ಲಿ ಕತೆ ಹೇಳುವ ಶಿಲ್ಪಮಾಳ, ಆಯಗಾರರ ಮಾಳ, ಮಕ್ಕಳ ಆಟದ ಮಾಳ, ಬಯಲು ರಂಗಮಂದಿರ, ಶುಚಿರುಚಿಯಾದ ಊಟ ನೀಡುವ ಲೋಕರುಚಿ ಉಪಹಾರ ಮಂದಿರ, ದೋಣಿ ವಿಹಾರದ ಸೌಲಭ್ಯವಿರುವ ಲೋಕ ಸರೋವರ, ನಂದಿನಿಹಾಲು ಮತ್ತು ಹಾಪ್‌ಕಾಮ್ಸ್‌ನ ತರಕಾರಿ ಮತ್ತು ಹಣ್ಣು ಮಾರಾಟ ಮಳಿಗೆ ಏನೆಂಟು ಏನಿಲ್ಲ ಜಾನಪದ ಲೋಕದಲ್ಲಿ?

ಸಂಶೋಧಕರಿಗೆ ಸಹಸ್ರಾರು ಗ್ರಾಮೀಣ ವಸ್ತುಗಳು, ಧ್ವನಿಮುದ್ರಿಕೆಗಳು, ಉತ್ತಮ ಗ್ರಂಥ ಭಂಡಾರ, ಆಡಿಯೋ ಮತ್ತು ವೀಡಿಯೋ ಕ್ಯಾಸೆಟ್‌ಗಳು, ಪ್ರೇಕ್ಷಕರಿಗೆ ಪ್ರತಿ ವಾರಾಂತ್ಯದಲ್ಲಿ ಮನರಂಜನಾ ಕಾರ್ಯ ಕ್ರಮಗಳು, ಆಸಕ್ತರಿಗೆ ಜನಪದ ಕಲೆಗಳ ತರಬೇತಿ ಶಿಬಿರಗಳು - ಎಲ್ಲಾ ಸೌಲಭ್ಯಗಳನ್ನು ಹೊಂದಿರುವ 'ಜಾನಪದ ಲೋಕ' ವಿಶ್ವದ ಜಾನಪದ ಕೇಂದ್ರಗಳಲ್ಲೊಂದೆಂಬ ಹೆಗ್ಗಳಿಕೆಗೆ ಕಾರಣೀಭೂತರಾದವರು, ವಿಶ್ವದ ಜಾನಪದ ಭೂಪಟದಲ್ಲಿ ಕರ್ನಾಟಕದ ಹೆಸರು ಮೂಡಿಸಿದವರು ಡಾ. ಎಚ್.ಎಲ್. ನಾಗೇಗೌಡರು.[೫]

ಜಾನಪದ ಲೋಕದ ನಿರ್ಮಾಣ ಕೆಲಸದಲ್ಲಿ ಗೌಡರು ಮಾಡಿದ ಕೆಲಸ ಮರೆಯಲಾಗದು ಅವರು ಮೊದಲು ಜಾನಪದ ವಸ್ತುಸಂಗ್ರಹಾಲಯವನ್ನು ಬೆಂಗಳೂರಿನ ಪುಟ್ಟ ಮಂದಿರದಲ್ಲಿ ಸ್ಥಾಪಿಸಿದ ಗೌಡರು ಇದನ್ನು ಬೃಹತ್ತಾಗಿ ಬೆಳೆಸುವ ಕನಸು ಕಂಡರು. ವಿಶಾಲವಾದ ಜಾಗಕ್ಕಾಗಿ ಬೆಂಗಳೂರನ್ನೆಲ್ಲಾ ಜಾಲಾಡಿದರು. ಯಾವುದೂ ಅವರ ಮನಸ್ಸಿಗೆ ಒಪ್ಪದಿದ್ದಾಗ ಬೆಂಗಳೂರಿನ ಹೊರಗೆ ಹುಡುಕಲಾರಂಭಿಸಿದರು. ಬೆಂಗಳೂರು-

ಮೈಸೂರು ಹೆದ್ದಾರಿಯಲ್ಲಿ ರಾಮನಗರದ ಬಳಿ ಸುಮಾರು ೧೫ ಎಕರೆಯಷ್ಟು ವಿಸ್ತಾರವಾದ ಹಳ್ಳ-ಕೊಳ್ಳದ, ಹುತ್ತಗಳಿಂದ ಕೂಡಿದ ಬೆಂಗಾಡು ಅವರ ಕಣ್ಣಿಗೆ ಬಿತ್ತು. ಜಾನಪದ ಲೋಕದ ನಿರ್ಮಾಣಕ್ಕೆ ಇದೇ ಸೂಕ್ತ ಸ್ಥಳ ಎಂದು ತೀರ್ಮಾನಿಸಿದ ಅವರು ಆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅದರಲ್ಲಿ ೧೯೮೬ರಿಂದ ೧೯೯೪ರವರೆಗೆ ಅಂದರೆ ೮ ವರ್ಷಗಳ ಕಾಲ ನಿರಂತರ ಶ್ರಮವಹಿಸಿ ಭಾರತದಲ್ಲಿಯೇ ಅತ್ಯಪೂರ್ವವಾದ ಸಾಂಸ್ಕೃತಿಕ ಕೇಂದ್ರವನ್ನು ನಿರ್ಮಾಣ ಮಾಡಿದರು. ನಾಗೇಗೌಡರ ಪರಿಶ್ರಮದ ಫಲವಾಗಿ ರೂಪುಗೊಂಡ ಈ ಕೇಂದ್ರ ಇಂದು 'ಜಾನಪದ ಲೋಕ' ಎಂಬ ಹೆಸರಿನಲ್ಲಿ ಜಗತ್ತಿನ ಜಾನಪದಾಸಕ್ತರ ಗಮನವನ್ನು ತನ್ನೆಡೆಗೆ ಸೆಳೆದಿದೆ.

ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ರಾಮನಗರದ ಬಳಿ ೧೫ ಎಕರೆ ವಿಸ್ತೀರ್ಣದಲ್ಲಿ ಸ್ಥಾಪಿಸಲ್ಪಟ್ಟಿರುವ ಈ ಜಾನಪದ ಲೋಕವು ಇಂದು ಭಾರತದಲ್ಲಿಯೇ ಅಪರೂಪದ, ಅಪೂರ್ವ ವೈಶಿಷ್ಟ್ಯಗಳಿಂದ ಕೂಡಿದ ನಿರ್ಮಾಣವೆನಿಸಿದೆ. ಜನಪದರ ಬದುಕಿನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸಂಬಂಧಗಳನ್ನು ಉಳಿಸಿಕೊಂಡು, ಆಧುನಿಕ ಸಂದರ್ಭದಲ್ಲೂ ಬದುಕು ಉಲ್ಲಾಸದಿಂದ ಕೂಡಿರುವಂತೆ ನೋಡಿಕೊಳ್ಳುವುದೇ ಜಾನಪದ ಲೋಕದ ಉದ್ದೇಶ ಮತ್ತು ಗುರಿಯಾಗಿರುತ್ತದೆ.

ಜಾನಪದ ಲೋಕವು ಒಳಾಂಗಣ ಮತ್ತು ಹೊರಾಂಗಣ ಎಂಬ ಎರಡು ವಿಧದ ಸ್ವರೂಪವನ್ನು ಹೊಂದಿದೆ. ಇಲ್ಲಿನ ಕಟ್ಟಡಗಳು ಗ್ರಾಮೀಣ ಮನೆಯ ಮಾದರಿಯಲ್ಲಿರುವುದರಿಂದ ಒಂದು ಹಳ್ಳಿಯ ವಾತಾವರಣ ಸೃಷ್ಟಿಯಾಗಿದೆ. ಅರಳೀಕಟ್ಟೆ, ದೇವಸ್ಥಾನ, ಕಲ್ಯಾಣಿಗಳು ಇಲ್ಲಿವೆ.

ಆಯಾ ವಿಷಯಕ್ಕನುಗುಣವಾದ ವಸ್ತುಗಳನ್ನು ಇಲ್ಲಿ ಬೇರೆ ಬೇರೆ ಕಟ್ಟಡಗಳಲ್ಲಿ ಪ್ರದರ್ಶಿಸಲಾಗಿದೆ. ಉದಾ:- ಲೋಕಮಾತಾ ಮಂದಿರದಲ್ಲಿ ಚಿತ್ರಪಟಗಳು, ಗೋಡೆ ಚಿತ್ರ, ಹಂಸಗಳು, ಬಾಗಿಲ ಚಿತ್ತಾರ ಮೊದಲಾದವು, ಕರ್ನಾಟಕದ ಗುಡ್ಡಗಾಡು ಜನರು ಬಳಸುವ ಬಿದಿರು ಬೆತ್ತದ ಮರದಿಂದ ಮಾಡಿದ ಸಾಧನಗಳು ಮುಂತಾದವು ಇವೆ. ಗ್ರಾಮೀಣ ಮಹಿಳೆಯರ ಕರಕುಶಲತೆಯನ್ನು ಇಲ್ಲಿ ಹೆಚ್ಚಿನ ವಸ್ತುಗಳು ಪ್ರತಿಬಿಂಬಿಸುತ್ತವೆ.

ಅಶೋಕ ಮಹಲ್ ಎಂಬ ಎರಡಂತಸ್ತಿನ ಕಟ್ಟಡದಲ್ಲಿ ಮದುವೆಯಲ್ಲಿ ಬಳಸುವ ಬಾಸಿಂಗ, ಹಸೆಮಣೆ, ಮುಂತಾದ ಪರಿಕರಗಳು, ಬೇಸಾಯದ ಉಪಕರಣಗಳು, ಮರ, ತೊಗಲುಗೊಂಬೆ, ಜನಪದ ವಾದ್ಯಗಳು, ಆಭರಣ-ಆಯುಧಗಳು ಇವೆ. ಶಿಲ್ಪಮಾಳದಲ್ಲಿ ನಾಡಿನ ವೀರಪುರುಷರ, ವೀರವನಿತೆಯರ ತ್ಯಾಗದ ನೆನಪಿಗಾಗಿ ವೀರಗಲ್ಲು ಮತ್ತು ಮಾಸ್ತಿಕಲ್ಲುಗಳ ಸಂಗ್ರಹವಿದೆ. ಆಯಗಾರರ ಮಾಳದಲ್ಲಿ ಬಡಗಿ, ಕಮ್ಮಾರ, ಕುಂಬಾರ, ಗಾಣಿಗರ ವೃತ್ತಿ ಸಂಬಂಧವಾದ ಸಲಕರಣೆಗಳನ್ನು ಕಾಣಬಹುದು.

ವಸ್ತುಸಂಗ್ರಹಾಲಯಗಳು ನಿರ್ಜೀವ ವಸ್ತುಗಳ ಸಂಗ್ರಹವಾಗಕೂಡದು, ಅವುಗಳನ್ನು ಪುನರುಜ್ಜೀವನಗೊಳಿಸಿ ನಮ್ಮ ಬದುಕಿನ ಭಾಗವಾಗಿ ಮಾಡಿಕೊಳ್ಳಬಹುದು ಎಂಬುದನ್ನು ಸಮರ್ಥಿಸುವಂಥ, ಜನಪದ ಕರಕುಶಲ ಕೆತ್ತನೆ, ಹೆಣಿಗೆ, ಕಸೂತಿ ಮುಂತಾದವುಗಳ ತಯಾರಿಕೆ ಮತ್ತು ಮಾರಾಟ ವ್ಯವಸ್ಥೆ ಇಲ್ಲಿದೆ.

ಇಲ್ಲಿನ ಆಡಿಟೋರಿಯಂ ಮತ್ತು ಬಯಲು ರಂಗಮಂದಿರಗಳಲ್ಲಿ ಪ್ರತಿನಿತ್ಯ ಜನಪದ ಕಲಾ ಪ್ರದರ್ಶನಗಳು ನಡೆಯುತ್ತವೆ. ಕಲಾವಿದರು ಬೇರೆ ಬೇರೆ ಸ್ಥಳಗಳಿಗೆ ಇಲ್ಲಿಂದ ಹೋಗಿ ಪ್ರದರ್ಶನ ನೀಡುತ್ತಾರೆ. ಜನಪದ ಕಲೆಗಳ ಅಭ್ಯಾಸವು ಇಲ್ಲಿದೆ. ಜಾನಪದ ಸಂಶೋಧನೆಗೆ ಆದ್ಯತೆ ನೀಡಲಾಗಿದೆ. ಜಾನಪದ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ಬೋಧಿಸಲಾಗುತ್ತಿದೆ. ವಿದ್ಯಾರ್ಥಿಗಳಿಗೆ ಶಿಕ್ಷಣದ ಜೊತೆಗೆ ಡೊಳ್ಳುಕುಣಿತ, ಪೂಜಾಕುಣಿತ, ತಮಟೆ ಬಾರಿಸುವುದು, ಕತ್ತಿವರಸೆ, ಪಟದ ಕುಣಿತ - ಹೀಗೆ ವಿವಿಧ ಜನಪದ ಕಲೆಗಳಲ್ಲಿ ತರಬೇತಿಯನ್ನು ನೀಡಲಾಗುತ್ತಿದೆ.

ಹೀಗೆ ಜಾನಪದ ಲೋಕವು ತನ್ನ ಗಾತ್ರ, ಪಾತ್ರ, ಸೂತ್ರಗಳನ್ನು ಹಿಗ್ಗಿಸಿಕೊಂಡು ಬೆಳೆಯುತ್ತಿರುವುದನ್ನು ಕಾಣಬಹುದು.

### ಕರ್ನಾಟಕ ಜಾನಪದ ಟ್ರಸ್ಟ್‌ನ ಸ್ಥಾಪನೆ

ನಾಗೇಗೌಡರ ಸುಮಾರು ೪೦ ವರ್ಷಗಳ ಸಾರ್ಥಕ ಸೇವಾ ಅವಧಿ ದಿನಾಂಕ ೭.೧೨.೧೯೭೪ರಂದು ಕೊನೆಗೊಂಡಾಗ ಅವರ ವಿಶ್ರಾಂತಿ ಜೀವನದ ಅವಿಶ್ರಾಂತತೆಯ ಹೊಸ ಬದುಕು ಆರಂಭವಾಯಿತು ಎನ್ನಬಹುದು. ಜಾನಪದ ಸಾಹಿತ್ಯದ ಸಂಗ್ರಹಣೆ, ಸಂಪಾದನೆ, ಧ್ವನಿಮುದ್ರಣ ಕಾರ್ಯ ಮೊದಲು ಆಗಬೇಕಾದ ಕೆಲಸ. ನಾಗರೀಕತೆಯ ಸೋಂಕಿನಿಂದಾಗಿ ಜಾನಪದ ಮೂಲೆ ಗುಂಪಾಗುತ್ತಿದೆ. ಆ ದಿಸೆಯತ್ತ ಸಾಹಿತಿಗಳು, ವಿದ್ವಾಂಸರು, ಬುದ್ಧಿಜೀವಿಗಳು ಗಮನಹರಿಸಬೇಕು. ಒಬ್ಬೊಬ್ಬ ಜನಪದ ಕಲಾವಿದ ಸತ್ತಾಗಲೂ ಒಂದೊಂದು ಗ್ರಂಥ ಭಂಡಾರವೇ ಮುಳುಗಿ ಹೋದ ಹಾಗೆ - ಹೀಗೆಲ್ಲಾ ಪರಿತಪಿಸಿದ ಅವರು ಆ ಕಲೆ ಹಾಗೂ ಕಲಾವಿದರು ಬದುಕದೇ ಹೋದರೆ ಹಳ್ಳಿಯ ಬಾಳು ಬರಡು, ಬಂಜರು, ನಿರ್ವೀಯ, ನಿಸ್ತೇಜ. ಅಂಥ ಪರಿಸ್ಥಿತಿಗೆ ನಾವು ಕಾರಣರಾಗಬಾರದು ಎಂದು ಯೋಚಿಸಿ ಜಾನಪದ ಕ್ಷೇತ್ರಕ್ಕೆ ತಮ್ಮನ್ನು ಸಂಪೂರ್ಣವಾಗಿ ಒಪ್ಪಿಸಿಕೊಂಡರು.[೬] ಅಷ್ಟೇ ಅಲ್ಲ, ನಾಡಿನ ಜನಸಂಖ್ಯೆಯಲ್ಲಿ ಶೇಕಡ ೧೦ರಷ್ಟಿರುವ ನಗರ ವಾಸಿಗಳನ್ನು ತೃಪ್ತಿಪಡಿಸುವ ಶಿಷ್ಟ ಸಂಗೀತ, ನಾಟಕ, ನೃತ್ಯ ಮೊದಲಾದ ಕಲೆಗಳಿಗೆ ಒಂದೊಂದಕ್ಕೂ ಪ್ರತ್ಯೇಕ ಅಕಾಡೆಮಿ ಇರುವಾಗ ಹಳ್ಳಿಗಳಲ್ಲಿ ವಾಸಿಸುವ ಶೇಕಡ ೯೦ರಷ್ಟು ಗ್ರಾಮೀಣ ಜನತೆಯ ಬಾಳಿಗೆ ರಸವುಣಿಸಿ ಅವರ ಮನಸ್ಸನ್ನು ತಣಿಸುತ್ತಾ ಬಂದಿರುವ ಜನಪದ ಕಲೆ, ಸಾಹಿತ್ಯಗಳಿಗೆ ಒಂದು ಅಕಾಡೆಮಿ ಬೇಕೆ ಬೇಕು ಎಂದು ೧೯೭೧ರಿಂದ ಸರ್ಕಾರವನ್ನು ಒತ್ತಾಯಿಸುತ್ತ ಬಂದರು.

ಹೀಗಿರುವಾಗ ಗೌಡರ ಅಭಿಮಾನಿಗಳಾದ ಶ್ರೀ ಮಾನ್ಯ ಜಿ. ನಾರಾಯಣರ ನಾಯಕತ್ವದಲ್ಲಿ ದಿನಾಂಕ ೧೧.೦೨.೧೯೭೯ರಂದು ಬೆಂಗಳೂರಿನಲ್ಲಿ ಏರ್ಪಡಿಸಿದ್ದ ಅಪೂರ್ವ ಅಭಿನಂದನಾ ಸಮಾರಂಭದಲ್ಲಿ ಜನತೆಯು ನೀಡಿದ ಒಂದು ಲಕ್ಷದ ಹದಿನೈದು ಸಾವಿರ ರೂಪಾಯಿಗಳನ್ನು ಮೂಲಧನವಾಗಿಟ್ಟುಕೊಂಡು ಗೌಡರು ಕರ್ನಾಟಕ ಜಾನಪದ ಟ್ರಸ್ಟ್‌ನ್ನು ಸ್ಥಾಪಿಸಿದರು.[೭] ಈಗ ಅದಕ್ಕೆ 'ಕರ್ನಾಟಕ ಜಾನಪದ ಪರಿಷತ್ತು' ಎಂದು ಹೆಸರು. ಅವರೇ ಅದರ ಆಜೀವ ಅಧ್ಯಕ್ಷರೂ ಆದರು. ಜಾನಪದದ ಸಮಗ್ರ ಸಂರಕ್ಷಣೆ

ಹಾಗೂ ಪ್ರಸಾರಕ್ಕೆ ಯೋಜನೆಗಳು ತಯಾರಾದವು. ನಾಡಿನ ಅನೇಕ ಗಣ್ಯರು ಹಾಗೂ ಜಾನಪದ ತಜ್ಞರು ಟ್ರಸ್ಟಿನ ಆಡಳಿತ ಮಂಡಳಿಯಲ್ಲಿದ್ದು ಗೌಡರ ಯೋಜನೆಗಳಿಗೆ ಬೆಂಬಲ ನೀಡಿದರು.

**ಟ್ರಸ್ಟಿನ ಸಾಧನೆಗಳು ಮತ್ತು ಯೋಜನೆಗಳು**

೧೯೭೯ರಲ್ಲಿ ಸ್ಥಾಪಿಸಲ್ಪಟ್ಟ ಕರ್ನಾಟಕ ಜಾನಪದ ಟ್ರಸ್ಟ್ ಈ ಕೆಳಕಂಡ ಅಮೂಲ್ಯವಾದ ಕೆಲಸ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ.

೧. ನಾಡಿನಾದ್ಯಂತ ಜನಪದ ಮೂಲ ಗಾಯಕರು ನೂರೆಂಟು ಧಾಟಿಗಳಲ್ಲಿ ಹಾಡಿರುವ ಸಹಸ್ರಾರು ಗಂಟೆಗಳಷ್ಟು ಕೇಳಬಹುದಾದ ಹಾಡುಗಳ ಧ್ವನಿ ಮುದ್ರಣ ಕಾರ್ಯವನ್ನು ಮಾಡುವುದು.

೨. ಈಗಾಗಲೇ ಧ್ವನಿ ಮುದ್ರಿಸಿಕೊಂಡಿರುವ ಮತ್ತು ಮುಂದೆ ಧ್ವನಿ ಮುದ್ರಿಸಿಕೊಳ್ಳುವ ಹಾಡುಗಳಲ್ಲಿ ಅತ್ಯುತ್ತಮವಾದ ಮೂಲಧಾಟಿಯ ಹಾಡುಗಳನ್ನು ಆಯ್ದು ಕ್ಯಾಸೆಟ್ ತಯಾರಿಸಿ ಜನರಿಗೆ ನಿಜವಾದ ಜನಪದ ಸಂಗೀತದ ಸೊಗಸನ್ನು ಪರಿಚಯ ಮಾಡಿಕೊಡುವುದು.

೩. ಹಾಲಿ ಧ್ವನಿ ಮುದ್ರಿಕೆಗಳಲ್ಲಿರುವ ಹಾಡುಗಳನ್ನು ಮತ್ತು ಮುಂದೆ ಧ್ವನಿ ಮುದ್ರಿಸಿಕೊಳ್ಳುವ ಹಾಡುಗಳನ್ನು ಬರೆದುಕೊಂಡು ಅವುಗಳ ಸಂಪಾದನೆ, ಅಧ್ಯಯನ ಮತ್ತು ಪ್ರಕಟಣೆಗೆ ಏರ್ಪಾಟು ಮಾಡುವುದು.

೪. ಪ್ರತಿ ತಿಂಗಳ ಎರಡನೆಯ ಶನಿವಾರ ಅಥವಾ ಭಾನುವಾರ ಬೆಂಗಳೂರಿನಲ್ಲಿ ಜನಪದ ಕಲಾ ಪ್ರದರ್ಶನ, ಗೀತ-ಗಾಯನ, ಟ್ರಸ್ಟಿನ ಧ್ವನಿ ಮುದ್ರಿಕೆಗಳ ಪ್ರಸಾರ, ಜಾನಪದ ಕುರಿತು ಭಾಷಣ ಇತ್ಯಾದಿಗಳನ್ನು ಏರ್ಪಡಿಸುವುದು.

೫. ಜನಪದ ಸಂಗೀತವನ್ನು ಮೂಲಧಾಟಿಗಳಲ್ಲಿ ಕಲಿತು ಹಾಡುವುದನ್ನು ಪ್ರೋತ್ಸಾಹಿಸಲು ಸ್ಪರ್ಧೆಗಳನ್ನು ಏರ್ಪಡಿಸುವುದು.

೬. ಜನಪದ ಕಥನಗೀತೆಗಳನ್ನಾಧರಿಸಿ ಗೀತ-ನೃತ್ಯ ರೂಪಕಗಳನ್ನು ರಚಿಸಿ, ಪ್ರದರ್ಶಿಸುವವರಿಗಾಗಿ ಸ್ಪರ್ಧೆಗಳನ್ನು ಏರ್ಪಡಿಸುವುದು.

೭. ಜನಪದ ಗೀತೆ, ನೃತ್ಯ, ಯಕ್ಷಗಾನ-ಬಯಲಾಟಗಳನ್ನು ರೇಡಿಯೋ ಮತ್ತು ದೂರದರ್ಶನಗಳಲ್ಲಿ ಪ್ರಸಾರ ಮಾಡಲು ಅನುಕೂಲವಾಗುವಂತೆ ಕಲಾವಿದರನ್ನು ತರಬೇತಿಗೊಳಿಸಿ ಅವರಿಗೆ ಆ ಪ್ರಸಾರ ಮಾಧ್ಯಮಗಳಲ್ಲಿ ಅವಕಾಶಗಳನ್ನು ಒದಗಿಸುವುದು.

೮. ಜನಪದ ಸಂಗೀತ, ನೃತ್ಯ, ನಾಟಕಗಳಿಗೆ ಸಂಬಂಧಿಸಿದ ವಾದ್ಯಗಳು, ವೇಷ-ಭೂಷಣಗಳು, ಚಿತ್ರಗಳು, ಸ್ಲೈಡ್‌ಗಳನ್ನು ತಯಾರಿಸಿ ಮತ್ತು ಸಂಗ್ರಹಿಸಿ ಬೆಂಗಳೂರಿನಲ್ಲಿ ಒಂದು ಚಿಕ್ಕದಾದ ಜಾನಪದ ಮ್ಯೂಸಿಯಂ ಸ್ಥಾಪಿಸುವುದು.

೯. ಜನಪದ ಕಲೆಗಳನ್ನು ಕಲಿಸುವುದಕ್ಕಾಗಿ ಒಂದು ಕಲಾ ಶಾಲೆಯನ್ನು ತೆರೆಯುವುದು.

೧೦. 'ಜಾನಪದ ಜಗತ್ತು' ಎಂಬ ತ್ರೈಮಾಸಿಕ ಪತ್ರಿಕೆಯ ಪ್ರಕಟಣೆ. ಇದು ಜಾನಪದಕ್ಕೆ ಮೀಸಲಾದ ಪತ್ರಿಕೆಯಾಗಿದ್ದು, ಇಂಥ ಪತ್ರಿಕೆ ಕರ್ನಾಟಕದಲ್ಲಿ ಇದೊಂದೇ.

೧೧. ಜಾನಪದ ಅಭ್ಯಾಸಕ್ಕೂ, ಸಂಶೋಧನೆಗೂ ಸಹಾಯವಾಗುವ ಅಮೂಲ್ಯ ಗ್ರಂಥ ಭಂಡಾರ.

೧೨. ಹಲವಾರು ಜನಪದ ಕಲಾ ಮಹೋತ್ಸವಗಳು ಮತ್ತು ವಿಚಾರ ಸಂಕಿರಣಗಳ ಏರ್ಪಾಡು.

೧೩. ಜನಪದ ಕಲಾವಿದರಿಗೆ ಸನ್ಮಾನ ಹಾಗೂ ಧನ ಸಹಾಯದ ಮೂಲಕ ಪ್ರೋತ್ಸಾಹ ನೀಡುವುದು.

೧೪. ಧ್ವನಿ ಮುದ್ರಣ, ವೀಡಿಯೋ ಚಿತ್ರೀಕರಣ, ಸ್ಲೈಡ್ ತಯಾರಿಕೆ ಮತ್ತು ಪ್ರದರ್ಶನ - ಇವುಗಳಿಗೆ ಅಗತ್ಯವಾದ ಯಂತ್ರೋಪಕರಣ ಮತ್ತು ಸಾಧನ ಸಲಕರಣೆಗಳ ಸಂಗ್ರಹ ಮಾಡುವುದು.

೧೫. ಜಪಾನ್, ಅಮೇರಿಕಾ ಮುಂತಾದ ದೇಶಗಳ ಅದರಲ್ಲೂ ರೆಡ್ ಇಂಡಿಯನ್ನರ ಸಂಗೀತ, ನೃತ್ಯ, ಜೀವನ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಡಿಸ್ಕ್‌ಗಳು ಕ್ಯಾಸೆಟ್‌ಗಳು, ವೀಡಿಯೋ ಕ್ಯಾಸೆಟ್‌ಗಳು, ಆಭರಣಗಳು, ಚಿತ್ರಗಳು, ಪಿಕ್ಚರ್ ಪೋಸ್ಟ್‌ಕಾರ್ಡುಗಳು, ಗ್ರಂಥಗಳು - ಇವುಗಳ ಸಂಗ್ರಹಣೆ.

೧೬. ಮೂಲ ಗಾಯಕರು ಹಾಡಿದ ಹಾಡುಗಳ ಕ್ಯಾಸೆಟ್ ತಯಾರಿಕೆ ಮತ್ತು ಮಾರಾಟ ಮಾಡುವುದು.

೧೭. ಧ್ವನಿಮುದ್ರಿಕೆಗಳ ಸಾಹಿತ್ಯವನ್ನು ಬರೆದುಕೊಂಡು ಅಭ್ಯಾಸ ಮಾಡಿ, ಸಂಪಾದನೆ ಮಾಡಿ ಗ್ರಂಥ ಗಳನ್ನು ಪ್ರಕಟಿಸುವುದು.

**ಜಾನಪದ ಲೋಕದ ಕಾರ್ಯಚಟುವಟಿಕೆಗಳು**

ಇಡೀ ಕರ್ನಾಟಕದ ಮತ್ತು ಅಷ್ಟೇ ಏಕೆ ಇಡೀ ಭಾರತದ ಆಸ್ತಿಯಾದ ಈ ಜಾನಪದ ಲೋಕದಲ್ಲಿ ದಿನನಿತ್ಯ ನಡೆಯುವ ಕಾರ್ಯಚಟುವಟಿಕೆಗಳು ಹೀಗಿವೆ:-

೧. ಜನಪದರ ಬಾಳು-ಬದುಕು, ಹಬ್ಬ-ಹರಿದಿನಗಳು, ಮದುವೆ-ಮುಂಜಿಗಳು, ಕೆಲಸ-ಕಸುಬುಗಳು, ಉಡುಗೆ-ತೊಡುಗೆಗಳು ಇತ್ಯಾದಿಗಳಿಗೆ ಸಂಬಂಧಪಟ್ಟ ಒಳ ಹಾಗೂ ಹೊರಾಂಗಣ ಮ್ಯೂಸಿಯಂಗಳ ಸ್ಥಾಪನೆ.

೨. ಗ್ರಾಮೀಣ ಧೀಮಂತ ಬದುಕಿಗೆ ಸಾಕ್ಷಿಯಾದ ವೀರಗಲ್ಲು, ಮಾಸ್ತಿಕಲ್ಲು, ಶಿಲಾಶಾಸನಗಳು ಇತ್ಯಾದಿಗಳ ಸಂಗ್ರಹ.

೩. ಬೆಂಗಳೂರು-ಮೈಸೂರು ಮಧ್ಯೆ ಓಡಾಡುವ ಸಹಸ್ರಾರು ಸಂಖ್ಯೆಯ ದೇಶ-ವಿದೇಶ ಪ್ರವಾಸಿಗರ ಮನರಂಜನೆಗಾಗಿ ಪ್ರತಿನಿತ್ಯ ಜನಪದ ಸಂಗೀತ, ನೃತ್ಯ, ನಾಟಕ, ಚಿತ್ರಕಲೆಗಳ ಪ್ರದರ್ಶನ.

೪. ಆಧುನಿಕ ಬಾಳಿಗೆ ಮಾರು ಹೋಗಿ ಕಂಪ್ಯೂಟರ್ ಯುಗದಲ್ಲಿ ಬಾಳು ಸಾಗಿಸುತ್ತಾ ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆಯಲ್ಲಿ ಮುಳುಗಿ ಹೋಗಿರುವ ಇಂದಿನ ಯುವ ಪೀಳಿಗೆಯು ಜನಪದ

ಜೀವನದಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡುವುದು. ಇದಕ್ಕಾಗಿ ಶಾಲಾ-ಕಾಲೇಜಿನ ವಿದ್ಯಾರ್ಥಿಗಳು ಹಲವಾರು ದಿವಸಗಳು ಜಾನಪದ ಲೋಕದಲ್ಲಿ ತಂಗಿದ್ದು ತಮ್ಮ ಮೂಲ ಸಂಸ್ಕೃತಿಯ ಪರಿಚಯ ಮಾಡಿಕೊಳ್ಳುವ ವ್ಯವಸ್ಥೆ ಮತ್ತು ಇದಕ್ಕಾಗಿ ಬೇಸಿಗೆ ಶಿಬಿರಗಳ ಏರ್ಪಾಡು ಮಾಡುವುದು.

೫. ಗ್ರಾಮೀಣ ಕಲಾವಿದರು ತಮ್ಮ ಕಲೆಗಳನ್ನು ಇಂದಿನ ಬದಲಾದ ಪರಿಸ್ಥಿತಿಗೆ ತಕ್ಕಂತೆ ಮಾರ್ಪಡಿಸಿಕೊಂಡು ಅದರ ಮೂಲಸತ್ವಕ್ಕೆ ಭಂಗ ಬರದಂತೆ ಪ್ರದರ್ಶನ ಮಾಡುವ ವ್ಯವಸ್ಥೆ. ಅದಕ್ಕಾಗಿ ತಕ್ಕ ತರಬೇತಿ, ವೇಷ-ಭೂಷಣಗಳ ವ್ಯವಸ್ಥೆ ಇತ್ಯಾದಿಗಳನ್ನು ಏರ್ಪಾಡು ಮಾಡುವುದು.

೬. ಇಂದಿನ ಯುವ ಪೀಳಿಗೆಗೆ ಜನಪದ ಕಲೆಗಳಲ್ಲಿ ತರಬೇತಿ ಹಾಗೂ ಜಾನಪದ ಶಿಕ್ಷಣವನ್ನು ನೀಡುವುದು.

೭. ಜನಪದಗೀತೆ, ನೃತ್ಯ, ಯಕ್ಷಗಾನ, ಬಯಲಾಟಗಳನ್ನು, ರೇಡಿಯೋ ಮತ್ತು ದೂರದರ್ಶನಗಳಲ್ಲಿ ಪ್ರಸಾರ ಮಾಡಲು ಅನುಕೂಲವಾಗುವಂತೆ ಕಲಾವಿದರನ್ನು ತರಬೇತಿಗೊಳಿಸಿ ಅವರಿಗೆ ಆ ಪ್ರಸಾರ ಮಾಧ್ಯಮಗಳಲ್ಲಿ ಅವಕಾಶಗಳನ್ನು ಒದಗಿಸುವುದು.

೮. ಗ್ರಾಮೀಣರ ಬಾಯಲ್ಲಿ ಇನ್ನೂ ವಿಫುಲವಾಗಿರುವ ಹಾಡು, ಕಥೆ, ಗಾದೆ, ಒಗಟು-ಒಡಪು ಇತ್ಯಾದಿಗಳ ಧ್ವನಿಮುದ್ರಣ ಕಾರ್ಯವನ್ನು ಮಾಡುತ್ತಿರುವುದು.

೯. ಜನಪದರ ಜೀವನದ ಸರ್ವ ಪ್ರಕಾರಗಳ ವೀಡಿಯೋ ಚಿತ್ರೀಕರಣ, ಸಾಕ್ಷ್ಯಚಿತ್ರ ತಯಾರಿಕೆ, ಸ್ಲೈಡ್‌ಗಳ ತಯಾರಿಕೆ ಮತ್ತು ಅವುಗಳ ಪ್ರದರ್ಶನ.

೧೦. ಜಾನಪದದ ಸಮಗ್ರ ಸಂಗ್ರಹ, ಅಧ್ಯಯನ, ಸಂಶೋಧನೆ ಈ ಕೆಲಸಗಳಿಗೆ ಪೂರಕವಾದಂತಹ ಭಾರತ ಹಾಗೂ ದೇಶ ವಿದೇಶಗಳಲ್ಲಿ ಪ್ರಕಟವಾದ ಎಲ್ಲಾ ಜಾನಪದ ಗ್ರಂಥಗಳ, ಸ್ಲೈಡ್‌ಗಳ, ಸಾಕ್ಷ್ಯಚಿತ್ರಗಳ ಮತ್ತು ಪತ್ರಿಕೆಗಳ ಬೃಹತ್ ಭಂಡಾರದ ಸ್ಥಾಪನೆ ಕಾರ್ಯ.

೧೧. ದೇಶ-ವಿದೇಶಿ ವಿದ್ವಾಂಸರು ಜಾನಪದದ ಅಧ್ಯಯನ ಮಾಡಲು ವ್ಯವಸ್ಥೆ.

೧೨. ಗ್ರಾಮೀಣ ಕಲಾವಿದರ ವೇಷ-ಭೂಷಣಗಳು, ವಾದ್ಯಗಳು ಮತ್ತು ಇನ್ನಿತರ ಸಲಕರಣೆಗಳನ್ನು ತಯಾರಿಸುವುದು.

೧೩. ಗ್ರಾಮೀಣ ಕರಕುಶಲ ವಸ್ತುಗಳ ತಯಾರಿಕೆ ಮತ್ತು ಮಾರಾಟ ಮಾಡುವುದು.

೧೪. ಗ್ರಾಮೀಣ ಮತ್ತು ಆದಿವಾಸಿ ಜನಾಂಗಗಳ ಮಹಿಳೆಯರ ಹೆಣಿಗೆ, ಹೊಲಿಗೆ, ರಂಗೋಲಿ, ಚಿತ್ತಾರ ಇತ್ಯಾದಿ ಕಲೆಗಳ ಶಿಕ್ಷಣಕ್ಕೆ ಮತ್ತು ಪ್ರದರ್ಶನಕ್ಕೆ ತಕ್ಕ ವ್ಯವಸ್ಥೆ.

೧೫. ಅಖಿಲ ಭಾರತ ಮಕ್ಕಳ ಚಲನಚಿತ್ರ ಸಂಸ್ಥೆಯ ಮೂಲಕ ಮಕ್ಕಳಿಗಾಗಿಯೇ ಮೀಸಲಾದ ಚಲನಚಿತ್ರಗಳ ಪ್ರದರ್ಶನ.

೧೬. ಜಾನಪದಕ್ಕೆ ಸಂಬಂಧಿಸಿದಂತೆ ಭಾಷಣಗಳು, ವಿಚಾರಗೋಷ್ಠಿಗಳು ಪುಸ್ತಕ ಪ್ರಕಟಣೆ ಇತ್ಯಾದಿ.

೧೭. ಕಣ್ಮರೆಯಾಗುತ್ತಿರುವ ಕುಸ್ತಿವರಸೆ, ಕತ್ತಿವರಸೆ, ದೊಣ್ಣೆ ವರಸೆ, ಬಿಜಲಿವರಸೆ ಇತ್ಯಾದಿ ಗಂಡು ಕಲೆಗಳಲ್ಲಿ ತರಬೇತಿ ನೀಡುವುದು.

೧೮. ಟಗರಿನ ಕಾಳಗ, ಕೋಣಗಳ ಕಂಬಳ, ಎತ್ತಿನಗಾಡಿ ಓಟ ಇತ್ಯಾದಿ ಗ್ರಾಮೀಣ ಕ್ರೀಡೆಗಳ ಪ್ರದರ್ಶನ,

೧೯. ಗ್ರಾಮೀಣ ಮಕ್ಕಳ ಅನೇಕ ಆಟೋಟಗಳಲ್ಲಿ ಸ್ಪರ್ಧೆ, ಪ್ರದರ್ಶನ ಇತ್ಯಾದಿಗಳಿಗೆ ಅವಕಾಶ.

೨೦. ಗ್ರಾಮೀಣರ ಹಬ್ಬ-ಹರಿದಿನಗಳ ಅದರಲ್ಲೂ ಸಾಂಸ್ಕೃತಿಕ ಪರಂಪರೆಯ ವೈಶಿಷ್ಟ್ಯಪೂರ್ಣವಾದ ಹಾಗೂ ಕಲಾತ್ಮಕವಾದವುಗಳ ಕ್ರಮಬದ್ಧವಾದ ಆಚರಣೆಗಳಿಗೆ ತಕ್ಕ ವಾತಾವರಣ ಇದಾಗಿದೆ.

೨೧. ಕಲಾವಿದರು ತಮ್ಮ ಕಲಾ ಪ್ರದರ್ಶನಗಳನ್ನು ತಕ್ಕ ವೇಷಭೂಷಣಗಳಲ್ಲಿ ಪ್ರದರ್ಶಿಸಲು ಅನುಕೂಲವಾಗುವಂತೆ ನಿಗದಿಯಾದ ವೇಷಭೂಷಣಗಳ ಭಂಡಾರ.

೨೨. ಜನಪದ ಗೀತೆ, ಜನಪದ ಕಲೆ, ನೃತ್ಯ, ಸಂಗೀತ, ಸಾಹಿತ್ಯ, ಪ್ರದರ್ಶನ, ಜಾನಪದ ಶಿಕ್ಷಣ, ಜಾನಪದ ವಸ್ತು, ಮೊದಲಾದವುಗಳಿಗೆ ಸಂಬಂಧಿಸಿದಂತೆ ಜಾನಪದ ಕಮ್ಮಟಗಳು, ವಿಚಾರ ಸಂಕಿರಣಗಳು ಹಾಗೂ ತರಬೇತಿ ಶಿಬಿರಗಳನ್ನು ಏರ್ಪಡಿಸುವುದು.

೨೩. ಜಾನಪದ ಮಹಾವಿದ್ಯಾಲಯದಲ್ಲಿ ವಿದ್ಯಾರ್ಥಿಗಳಿಗೆ ಜಾನಪದ ಬೋಧನೆ ಹಾಗೂ ಆ ವಿದ್ಯಾರ್ಥಿಗಳಿಗೆ ವಿವಿಧ ಕಲೆಗಳಲ್ಲಿ ಅಂದರೆ ಪಟಾಕುಣಿತ, ಪೂಜಾಕುಣಿತ, ಸುಗ್ಗಿಕುಣಿತ, ಡೊಳ್ಳಿನಕುಣಿತ, ಬೀಸುಕಂಸಾಳೆ, ವೀರಗಾಸೆ, ಕತ್ತಿವರಸೆ, ಇನ್ನೂ ಮುಂತಾದ ಕಲೆಗಳಲ್ಲಿ ತರಬೇತಿ ನೀಡುವುದು.

೨೪. ಜಾನಪದ ಲೋಕದಲ್ಲಿ ಪ್ರತಿವರ್ಷ ನಡೆಯುವ ದಸರಾ ಉತ್ಸವ, ಗಾಳಿಪಟ ಉತ್ಸವ, ಜಾನಪದ ಲೋಕೋತ್ಸವ, ಮೊದಲಾದ ಕಾರ್ಯಕ್ರಮಗಳಲ್ಲಿ ಜನಪದ ಕಲಾವಿದರನ್ನು ಕರೆಸಿ ಅವರಲ್ಲಿರುವ ಕಲೆಯನ್ನು ಪ್ರದರ್ಶಿಸಿ ಅವರಿಗೆ ಪ್ರೋತ್ಸಾಹ, ಗೌರವ ನೀಡಿ ಸನ್ಮಾನಿಸಲಾಗುವುದು.

೨೫. ಕೇಂದ್ರಕ್ಕೆ ಭೇಟಿ ಕೊಡುವವರಿಗೆ ಗ್ರಾಮೀಣರ ವಿಶಿಷ್ಟ ಆಹಾರ-ಪಾನೀಯಗಳನ್ನು ಒದಗಿಸುವ ವ್ಯವಸ್ಥೆ ಇದೆ.

ಒಟ್ಟಿನಲ್ಲಿ ನಮ್ಮ ಜನರಲ್ಲಿ ಅದರಲ್ಲಿಯೂ ಇಂದಿನ ಯುವಪೀಳಿಗೆಯಲ್ಲಿ ತಮ್ಮ ಸಂಸ್ಕೃತಿಯ ಬಗ್ಗೆ ಅಭಿಮಾನ, ಆಸಕ್ತಿ, ಶ್ರದ್ಧೆ, ಇತ್ಯಾದಿಗಳನ್ನು ಚೇತನಗೊಳಿಸುವ ಘನ ಉದ್ದೇಶಗಳನ್ನು ಜಾನಪದ ಲೋಕ ಇಟ್ಟುಕೊಂಡಿದೆ.

**ಸಲಕರಣೆಗಳ ಸಂಗ್ರಹಕ್ಕೆ ಮಾಡಿದ ಪ್ರಯತ್ನ**

ಗ್ರಾಮೀಣ ಪ್ರದೇಶದಲ್ಲಿ ಇನ್ನೂ ಹುದುಗಿರುವ ಜನಪದ ಕಲೆ, ಜಾನಪದ ವಸ್ತುಗಳು, ಜಾನಪದ ಹಾಡು-ಪಾಡು - ಹೀಗೆ ಒಟ್ಟಾರೆ ಜಾನಪದ ಪರಂಪರೆಯನ್ನು ಉಳಿಸಿ ಬೆಳೆಸಿ ಸಂರಕ್ಷಿಸುವ ಉದ್ದೇಶದಿಂದ

ನಾಗೇಗೌಡರು ನಾಡಿನ ಮೂಲೆ ಮೂಲೆಗಳಲ್ಲಿ ಅಡಗಿರುವ ಜಾನಪದ ವಸ್ತುವಿಶೇಷಗಳನ್ನು ಸಂಗ್ರಹಿಸಲು ಮುಂದಾದರು. ಇದಕ್ಕೆ ಸರ್ಕಾರ ಹಾಗೂ ಸರ್ಕಾರೇತರ ಸಂಘ-ಸಂಸ್ಥೆಗಳು ಗಮನಹರಿಸಬೇಕು ಎಂಬುದು ಗೌಡರ ಬಯಕೆಯಾಗಿತ್ತು.[೮]

ಸರ್ಕಾರಿ ನೌಕರಿಯಲ್ಲಿದ್ದ ನಾಗೇಗೌಡರು ತಮ್ಮ ವೃತ್ತಿಯ ಜೊತೆಗೆ ಹೋದ ಕಡೆಯಲೆಲ್ಲಾ ಜಾನಪದ ಕಥೆ, ಜಾನಪದ ಗೀತೆ, ನಾಟಕ, ನೃತ್ಯ ಹಾಗೂ ಸಂಗೀತ, ಜಾನಪದ ವಸ್ತುಗಳ ಸಂಗ್ರಹ ಕಾರ್ಯದಲ್ಲಿ ನಿರತರಾದರು. ಗೌಡರಿಗೆ ಜಾನಪದ ಸಂಗ್ರಹದ ಹುಚ್ಚು ಎಷ್ಟಿತ್ತೆಂದರೆ, ಅವರು ಜಿಲ್ಲಾಧಿಕಾರಿಯಾಗಿ ಕೆಲಸ ಮಾಡಿದ ಶಿವಮೊಗ್ಗ, ಮಂಗಳೂರು, ಚಿಕ್ಕಮಗಳೂರಿನ ಸುತ್ತಮುತ್ತಲ ಗ್ರಾಮಗಳಲ್ಲಿ ಸಾಕಷ್ಟು ವಸ್ತುಗಳನ್ನು ಸಂಗ್ರಹಿಸಿದರು ಹಾಗೂ ಶಿವಮೊಗ್ಗದಲ್ಲಿ ಜಿಲ್ಲಾ ಮ್ಯೂಸಿಯಂ ಸ್ಥಾಪನೆ ಮಾಡಿದರು. ನಂತರ ರಾಜ್ಯದ ನಾನಾ ಭಾಗಗಳಲ್ಲಿ ಸಂಚರಿಸಿ ನಾನಾ ರೀತಿಯ ವಸ್ತುವೈವಿಧ್ಯತೆಯನ್ನು ಸಂಗ್ರಹಿಸಿದರು.

ತಮ್ಮ ನಿವೃತ್ತಿ ನಂತರ ವಿಶ್ರಾಂತಿ ಪಡೆಯದ ಅವರು ರಾಜ್ಯಾದ್ಯಂತ ಜನಪದ ಕಲಾವಿದರ ಜೀವನ ಅಧ್ಯಯನ ಮಾಡಲು ಹೊರಟು, ಸಾವಿರಾರು ಗಂಟೆಗಳ ಕಾಲ ಕೇಳಬಹುದಾದ ಜನಪದ ಹಾಡಿನ ಧ್ವನಿ ಮುದ್ರಣ, ಛಾಯಾಚಿತ್ರ ಮತ್ತು ನೂರಾರು ಗಂಟೆಗಳ ವೀಡಿಯೋ ಚಿತ್ರೀಕರಣ ಕೆಲಸದಲ್ಲಿ ತೊಡಗಿ ಸಾಕಷ್ಟು ಮಾಹಿತಿ ಸಂಗ್ರಹಿಸಿದರು. ನಾಡಿನಾದ್ಯಂತ ತಿರುಗಿ ನೂರಾರು ಗಂಟೆ ಕೇಳುವಷ್ಟು ಜಾನಪದ ಹಾಡುಗಳನ್ನು ಸಂಗ್ರಹಿಸಿದ್ದಲ್ಲದೆ ಹೆರಗನಹಳ್ಳಿ ಸೋಬಾನೆ ಚಿಕ್ಕಮ್ಮ ಹಾಡಿದ ಎಲ್ಲಾ ಹಾಡುಗಳನ್ನು ಸಂಗ್ರಹಿಸಿ, ಪುಸ್ತಕ ಮಾಡಿ ಆ ಬಡ ವಿಧವೆಗೆ ಜಾನಪದ ಲೋಕದಲ್ಲಿ ಅಚ್ಚಳಿಯದ ಸ್ಥಾನ ನಿರ್ಮಿಸಿಕೊಟ್ಟಿದ್ದಾರೆ.[೯]

### ಟ್ರಸ್ಟಿನ ಮ್ಯೂಸಿಯಂಗೆ ದೊಡ್ಡಬಳ್ಳಾಪುರ ಭಾಗದ ವಸ್ತುಗಳ ಸಂಗ್ರಹ

ದೊಡ್ಡಬಳ್ಳಾಪುರ ತಾಲ್ಲೂಕಿನ ಹಳ್ಳಿಗಳ ಯಾವುದೇ ಮನೆಯ ಒಳಗೆ ಹೋದರೂ ಅಡಕಲು ಏರಿಸಿದ ಮಡಕೆಯ ಸಾಲು ಸಾಲುಗಳನ್ನು ಕಾಣಬಹುದು. ಇವುಗಳಲ್ಲಿ ಆಳೆತ್ತರದ ಸಾದಾ ವಾಡೆಗಳು, ಅಲ್ಲದೆ ಗುಂಡುವಾಡೆ, ಉದ್ದವಾಡೆ, ಮಜ್ಜಿಗೆ ವಾಡೆಗಳೆಂದು ನಾನಾ ಬಗೆ. ವಾಡೆಗಳೆಂದರೆ ದವಸ ಧಾನ್ಯಗಳನ್ನು ತುಂಬಿಟ್ಟುಕೊಳ್ಳುವ ಮಣ್ಣಿನ ದೊಡ್ಡ ಮತ್ತು ಎತ್ತರದ ಮಡಿಕೆಗಳು. ಕಡಾಯಿಯಂತ ಮಡಿಕೆ, ಬಂದ ಮಡಕೆ, ಬಾನೆ, ಅರವಿ ಹಾಗೆ ಒಂದೇ ಎರಡೇ ಒಂದಕ್ಕಿಂತ ಒಂದು ಸೊಗಸು.[೧೦]

ದೊಡ್ಡಬಳ್ಳಾಪುರ ಸುತ್ತಿನ ನಾಗದೇವನಹಳ್ಳಿ, ನೇರಳಘಟ್ಟ, ತಿಪ್ಪೂರು, ತ್ಯಾಮಗೊಂಡ್ಲು, ಹಣಬೆ, ಕೊಡಗೆಹಳ್ಳಿ, ಚಿಕ್ಕ ತುಮಕೂರು, ಹೊನ್ನಘಟ್ಟ, ತಳಿಗವಾರ, ಗುಂಡಂಗೆರೆ, ನಾಗಸಂದ್ರ ಮೊದಲಾದ ಊರುಗಳಿಂದ ದೀಪದ ಸ್ಥಂಭಗಳು, ದೀಪದ ಅಲಕುಗಳು, ಕುಂಕುಮ ಭರಣಿಗಳು, ನಾಮದ ಬಟ್ಟಲುಗಳು, ವಿಭೂತಿ ಭರಣಿ, ರಂಗೋಲೆ ಬಟ್ಟಲು, ದೂಪಾರತಿ, ಅಳತೆ ಸಾಧನಗಳಾದ ಬಿದಿರಿನ ಪಡಿ, ಬಿದಿರಿನ ಗೂಡೆ, ಹತ್ತು ಸೇರು ಕೊಳಗ, ಗೇರು ಕೊಳಗ, ಸೊಲಗೆ, ಸೇರು, ಮರದ ಸೇರು, ಪಾವು, ಅರ್ಧ

ಪಾವು, ಚಟಾಕು ತೂಕದ ಕಲ್ಲುಗಳು, ಬಂಗಾರ ದೂಗುವ ತಕ್ಕಡಿ, ಬಿದಿರಿನ ತಕ್ಕಡಿ ತಟ್ಟೆಗಳು, ಕುಟ್ಟುವಾಗ ಬಳಸುವ ಒನಕೆ, ಗೇರು ಕುಂದಣಿಗೆಗಳು ಹಾಗೂ ಹಿಟ್ಟುಗೆರಸೆ, ಪುಟ್ಟಿ, ಹೂವಿನ ಬುಟ್ಟಿ ಇತ್ಯಾದಿಗಳು.

ಅಡಿಗೆ ಮನೆಯ ಸಾಧನಗಳಾದ ಮಂತುಕೋಲು, ಹಿತ್ತಾಳೆ ಮತ್ತು ಮರದ ಒತ್ತು ಸ್ಯಾವಿಗೆ ಒರಳುಗಳು, ಚಕ್ಕರಿ ಒರಳುಗಳು, ತುರೆಮಣೆ, ಕಂಚಿನಲೋಟ, ಗಂಗಾಳ, ತಂಬಿಗೆಗಳು, ಹಿತ್ತಾಳೆ ಚಂಬು, ಕಳಸ, ಗೋಮುಖಿಗಳು, ಪಿಂಗಾಣಿಸಿಂಬೆ, ಪಡ್ಡಿನ ಹಂಚು, ಮರದ ಸೌಟು, ಮೊದಲಾದವುಗಳು. ಆಯುಧಗಳಾದ ಗಂಡುಕೊಡಲಿ, ಕತ್ತಿಗಳು, ಭರ್ಜಿ, ಮಚ್ಚು, ಮರದ ಚಾಕು, ಪಿಕಾಸಿಗಳು, ಮರದ ಗದೆ, ಮರದ ಒಳಲೆಗಳು, ತಬಲದ ಹೊಳವು ನಾಗಸ್ವರದ ಬುರೆ, ಮಣ್ಣಿನ ವಸ್ತುಗಳಾದ ತುಪ್ಪದ ಕುಡಿಕೆ, ಹಳೇ ಕಾಲದ ಹಣತೆ, ಮೊಗೆ, ಕುಡಿಕೆ, ತಾಟು, ಸಟ್ಟ, ಅರವಿ, ಬಾನಿ, ಬಂದ ಮಡಿಕೆ, ಉದ್ದವಾಡೆ, ಗುಂಡು ವಾಡೆಗಳು - ಸೊಗಸಾದ ಮಾಟದ ಅಡಿಕೆ ಕುಟ್ಟಣಿಗಳು, ಪತ್ತು, ಬಾವಿಗಡಗ, ಕಪಲೆ ಬಾನಿ, ಚರ್ಮದ ಕಪಲೆ ಬಾನಿ, ಹಡಪದ ಚೀಲ, ಹಳೇ ಕಾಲದ ಬೀಗಗಳು, ಮೈಸೂರು ಸಂಸ್ಥಾನ ಈಸ್ಟ್ ಇಂಡಿಯಾ ಕಂಪನಿ ಕಾಲದ ೧೨೭ ನಾಣ್ಯಗಳು (ಇವುಗಳಲ್ಲಿ ಉರ್ದು ಲಿಪಿ ನಾಣ್ಯಗಳು, ಗುರುತಿಸಲಾಗದ ನಾಣ್ಯಗಳು ಇವೆ).

ಬೇಸಾಯದ ಉಪಕರಣಗಳಾದ ಕೊರಡೆ, ಮರ, ಕೊಡಲೆ, ಕೂರಿಗೆ ಬಟ್ಟಲುಗಳು, ನೇಗಿಲು ಗುಳ, ಹೆಲೆ ಅಂಡೆ, ಚಕ್ಕಾರಿ, ನೇಗಿಲು, ರೆಕ್ಕೆ ನೇಗಿಲು ಮೊದಲಾದವು ಹಾಗೂ ದನಗಳಿಗೆ ಔಷಧಿ ಹಾಕಲು ಗಂಟಲು ಪರೀಕ್ಷಿಸಲು ಬಳಸುವ ಗೊಟ್ಟ ಮತ್ತು ಕೈಕೋಳಗಳು, ಅಲ್ಲದೆ ಎರಡು ಕಡತ ಒಂದು ಓಲೆಗರಿಯ ಕಟ್ಟನ್ನೂ ಸಂಗ್ರಹಿಸಲಾಯಿತು.

ಮೇಲಿನ ವಸ್ತುಗಳನ್ನು ನಾಗದೇವನಹಳ್ಳಿಯ ಎಂ. ನಾರಾಯಣಪ್ಪ, ಚನ್ನರಾಯಪ್ಪ, ಅಂಜನಪ್ಪ, ಇಂಜಿನಿಯರ್ ಅಂಜನಪ್ಪ, ನೇರಳಘಟ್ಟದ ವೇಣಗೋಪಾಲಯ್ಯ. ಚಿಕ್ಕ ಹನುಮಣ್ಣ, ಎನ್.ಹೆಚ್. ವೀರಣ್ಣ, ಟಿ. ಸಿದ್ಧಪ್ಪ, ಕೃಷ್ಣಪ್ಪ, ಹನುಮಂತರಾಯಪ್ಪ, ಚನ್ನಪ್ಪ, ಜಗದೀಶ್, ತಿಪ್ಪರಿನ ನಂಜುಂಡಪ್ಪ, ತ್ಯಾಮಗೊಂಡ್ಲುವಿನ ರಂಗಸ್ವಾಮಿ, ಹಣಬೆ ಗ್ರಾಮದ ಕರಗದ ಬಾಗಿಲು ಶ್ರೀರಾಮಯ್ಯ, ಭೈರಪ್ಪ, ಅಕ್ಕಯ್ಯಮ್ಮ, ನಂಜುಂಡೇಗೌಡ, ನಾರಾಯಣಪ್ಪ, ಕೊಡಗೆಹಳ್ಳಿಯ ಸಿದ್ಧಲಿಂಗಪ್ಪ, ಅಶ್ವತ್‌ಕುಮಾರ, ಗಡ್ಡಮಯ್ಯ, ನರಸಿಂಹಮೂರ್ತಿ, ಸಿದ್ಧಲಿಂಗಯ್ಯ, ವೆಂಕಟೇಶಪ್ಪ, ಕೆ.ಎಲ್. ವೀರಪ್ಪ, ಶಿವನಂಜಪ್ಪ ಚಲಪತಿ, ಹೊನ್ನಾಘಟ್ಟದ ನಾರಾಯಣಪ್ಪ, ತಳಗವಾರ ಗ್ರಾಮದ ಚನ್ನಮ್ಮ ನರಸಪ್ಪ, ಅಂಗಡಿ ನಂಜಮ್ಮ, ಚೌಡಪ್ಪ, ಗೌಡರ ಮುನಿಶಾಮಪ್ಪ, ಲಕ್ಷ್ಮೀನಾರಾಯಣ, ನಂಜುಂಡಪ್ಪ, ಚಿಕ್ಕ ತುಮಕೂರಿನ ಚಿಕ್ಕಪ್ಪಯ್ಯ, ಗುಂಡುಂಗೆರೆ ಗ್ರಾಮದ ಗೋವಿಂದರಾಜು, ಓಜೇನಹಳ್ಳಿ ಚಿಕ್ಕಗಡ್ಡಯ್ಯ, ನಾಗಸಂದ್ರ ಗ್ರಾಮದ ಕರ್ನಾಳಿ ಚಿಕ್ಕಮಲ್ಲಣ್ಣ, ಗಿರಿಯಪ್ಪನ ಶಿವಮ್ಮ, ಜೋಗಳಿ ರುದ್ರಪ್ಪ, ಕಣಿಯಪ್ಪನವರ ಮಗ ಕೆ.ಎನ್. ಸಾಕಣ್ಣ ಮತ್ತು ಬಸಮ್ಮ, ಅರ್ಚಕರ ರಾಮಚಂದ್ರಪ್ಪ, ಪಾಪಮ್ಮ, ಪಿಳ್ಳಬಸಪ್ಪ, ದೊಡ್ಡಬಳ್ಳಾಪುರದ ಶಿಕ್ಷಕಿ ಲೋಕಮಾತಾದೇವಿ, ಸುಂದರೇಶ್, ಶಿಕ್ಷಕ ಟಿ. ರಂಗಸ್ವಾಮಿ, ಕೊಂಗಾಡಿಯಪ್ಪ ಪ್ರೌಢ ಶಾಲೆಯ ಶಿಕ್ಷಕರು ಮತ್ತು ವಿದ್ಯಾರ್ಥಿಗಳು, ಕೋಲಾರ ತಾಲ್ಲೂಕು ಗೊರ್ಜೇನಹಳ್ಳಿಯ ಸೊನ್ನಪ್ಪ, ಕಾಡಹಳ್ಳಿಯ

ಮುನೇಗೌಡರ ಮುನಿಯಪ್ಪ, ಮೊದಲಾದವರುಗಳಿಂದ ತಾರೀಖು ೦೨.೦೭.೧೯೮೯ರಂದು ಟ್ರಸ್ಟಿನ ಅಧ್ಯಕ್ಷರಾದ ಶ್ರೀ ಎಚ್.ಎಲ್. ನಾಗೇಗೌಡರು ಆಯಾ ಹಳ್ಳಿಗಳಿಗೆ ಹೋಗಿ ಸ್ವೀಕರಿಸಿದರು. ಟ್ರಸ್ಟಿನ ಸಹ ಕಾರ್ಯದರ್ಶಿ ಶ್ರೀ ಎ.ಎನ್. ಶಿವರಾಮು, ಕುರುವ ಬಸವರಾಜ್ ಮತ್ತು ಕೆ.ವಿ. ಶ್ರೀನಿವಾಸರು ಈ ಎಲ್ಲಾ ವಸ್ತುಗಳನ್ನು ಜಾನಪದ ಲೋಕಕ್ಕೆ ಸಾಗಿಸಿದರು.[೧೧]

ನಂತರ ತಳಗವಾರ ಗ್ರಾಮದ ಹರಿಜನ ಹೆಂಗಸರಾದ ಮಾರಕ್ಕ, ಅಕ್ಕಯಮ್ಮ, ಚನ್ನಮ್ಮ, ಹನುಮಕ್ಕರಿಂದ ಸೋಬಾನೆ ಪದ, ದುರುಗವ್ವನ ಪದ ಮೊದಲಾದವುಗಳನ್ನು, ಚಿಕ್ಕ ತುಮಕೂರಿನ ಮಾಳಮ್ಮ, ಗಂಗಮ್ಮರಿಂದ ಎಲ್ಲಮ್ಮನ ಕುರಿತ ಹಾಡುಗಳನ್ನು ಹಾಗೂ ಅದೇ ಗ್ರಾಮದ ಚಿಕ್ಕ ನಾಗಪ್ಪ, ಜಿ. ಮೈಲಾರಪ್ಪ, ಗುರುಪ್ಪರಿಂದ ತಾಸೆ, ರಮ್‌ದೋಳ್, ತಮಟೆ ವಾದ್ಯ ಸಂಗೀತವನ್ನು ಧ್ವನಿ ಮುದ್ರಿಸಿಕೊಳ್ಳಲಾಯಿತು. ವಸ್ತು ಸಂಗ್ರಹವೂ ಸೇರಿದಂತೆ ಈ ಎಲ್ಲಾ ಕಾರ್ಯಕ್ರಮಗಳನ್ನು ಶ್ರೀ ಎ. ಶ್ರೀನಿವಾಸಮೂರ್ತಿಯವರು ವೀಡಿಯೋ ಮಾಡಿಕೊಂಡರು.

ಮೇಲಿನ ಈ ಎಲ್ಲಾ ಕಾರ್ಯದಲ್ಲಿ ನೆರವಾದವರು ದೊಡ್ಡಬಳ್ಳಾಪುರದ ಕೊಂಗಾಡಿಯಪ್ಪ ಪ್ರೌಢ ಶಾಲೆಯ ಅಧ್ಯಾಪಕರುಗಳಾದ ಶ್ರೀ ವೆಂಕಟೇಶಪ್ಪ, ಶ್ರೀ ದೊಡ್ಡರಂಗಪ್ಪ, ಜಿ.ಜಿ.ಎಂ.ಎಸ್. ಶಾಲೆಯ ಶ್ರೀ ಖಲೀಲುಲ್ಲಾಖಾನ್, ಸರ್ಕಾರಿ ಕಿರಿಯ ಕಾಲೇಜಿನ ಬಿ. ಶಿವಕುಮಾರ್ ಹಾಗೂ ಕೊಡಗೇಹಳ್ಳಿ ಮಂಡಲ ಪಂಚಾಯ್ತಿ ಪ್ರಧಾನರಾದ ಶ್ರೀ ಸಿದ್ಧಲಿಂಗಯ್ಯ, ನೇರಳಘಟ್ಟದ ಶ್ರೀ ಚನ್ನಪ್ಪ ಮೊದಲಾದವರು.

ಬೆಂಗಳೂರು ಲಕ್ಕಸಂದ್ರದ ಶ್ರೀಮತಿ ತೂಗೂರು ಮುನಿಯಮ್ಮನವರ ಮಗ ಶ್ರೀ ವಿ. ಶ್ರೀನಿವಾಸ ಮೂರ್ತಿ ಅವರು ತಾರೀಖು ೧೧.೦೮.೧೯೮೯ರಂದು ಟ್ರಸ್ಟಿನ ವಸ್ತುಸಂಗ್ರಹಾಲಯಕ್ಕೆ ಬೆತ್ತದ ತಾಂಬೂಲದ ತಟ್ಟೆ. ಚಕ್ಕಲಿ ಒರಳು. ವಳಲೆ ಮತ್ತು ಮಡಿಚುವಂತಿರುವ ಚನ್ನೇಮಣೆಗಳನ್ನು ತಂದುಕೊಟ್ಟಿದ್ದಾರೆ.

### ಲೋಕದ ಸಂಗ್ರಹಾಲಯಕ್ಕೆ ಕರಾವಳಿಯ ಎಣ್ಣೆಗಾಣ

ಜೋಡೆತ್ತು ಕಟ್ಟಿ ತಿರುಗಿಸುವ ಗಾಣಗಳು ಎಲ್ಲೆಲ್ಲೂ ಸಾಮಾನ್ಯ. ಆದರೆ ದಕ್ಷಿಣ ಕನ್ನಡ ಭಾಗದಲ್ಲಿ ಎತ್ತುಗಳಿಗೆ ಬದಲು ಒಬ್ಬ ವ್ಯಕ್ತಿ ಹಗ್ಗ ಹಿಡಿದು ತಿರುಗಿಸಬಹುದಾದ ಗಾಣದ ಬಳಕೆ ಹೆಚ್ಚು. ಶ್ರೀ ಪುಟ್ಟಯ್ಯ ಗಾಣಿಗ ಅವರು ಇಂತಹ ಮರದ ಎಣ್ಣೆಗಾಣದ ಜೊತೆಗೆ ಜಿಂಕೆಕೊಂಬು, ಹಿತ್ತಾಳೆ ಎಸಮುಚ್ಚಳ ತಾಮ್ರದ ಸೇರು, ಎಣ್ಣೆ ಅಳತೆ ಹಾಗೆ, ಮರದ ಮಸುರೆ ಮರಿಗೆ ಇತರೆ ವಸ್ತುಗಳನ್ನು ಹಾಗೂ ತೆಕ್ಕಟೆಯ ಶ್ರೀನಿವಾಸ ಅಡಿಗರು ಸ್ಯಾವಿಗೆ ಒರಳು, ಮರದ ಏತದ ಬಾನಿ, ದೊಟ್ಟೆಕಲ ವಸ್ತುಗಳನ್ನು ಜಾನಪದ ಲೋಕದ ವಸ್ತುಸಂಗ್ರಹಾಲಯಕ್ಕೆ ನೀಡಿದ್ದಾರೆ.[೧೨] ಇವರನ್ನು ಪರಿಷತ್ತು ನೆನೆಯುತ್ತದೆ.

### ವಸ್ತುಸಂಗ್ರಹಾಲಯಕ್ಕೆ ಮತ್ತಷ್ಟು ವಸ್ತುಗಳು

ಮೈಸೂರು ಅರಮನೆಯ ನಗರ ಸಾಧನೆಯ ಮಹತ್ವವನ್ನೇ ಸಾಧಿಸಿದ ಕರ್ನಾಟಕ ಕಂಡ ಕೊನೆಯ ರಾಜವಂಶ ಆಳಿದ ನೆಲ. ಇಲ್ಲಿಯ ಹಳೆಯ ಮನೆಗಳಲ್ಲಿ ನಡೆದಾಡಿದರೆ ನಾವು ಅದೆಷ್ಟೋ ವರ್ಷ ಹಿಂದೆ ನಡೆದಾಡಿದಂತೆ.

ಇಲ್ಲಿನ ಸಯ್ಯಾಜಿರಾವ್ ರಸ್ತೆಯ ಹಳೆಯ ಮನೆ ಶ್ರೀಮತಿ ಇಂದಿರಮ್ಮ ಶ್ರೀ ಗೋಕುಲನ್ ಮನೆ, ದಸರೆಯ ಅಂಬಾರಿ ಸಾಗುತ್ತಿದ್ದಾಗ ನೋಡಲು ನಿಲ್ಲುತ್ತಿದ್ದ ಮನೆಯ ಮಹಡಿಯ ಭಾಗಗಳು, ಒಳಗಿನ ಅಲಂಕಾರಗಳು, ಅದೊಂದು ಬಗೆಯ ಭಿನ್ನತೆ, ಮೈಸೂರು ಮಹಾರಾಜರ ಅರಮನೆಯ ದರ್ಬಾರಿನಲ್ಲಿ ಸ್ಥಾನ ಪಡೆದಿದ್ದ ಈ ಮನೆಯ ಹಿರಿಯರು ಅರಮನೆಗೆ ಒಡವೆ, ಬಂಗಾರದ ಹೆಣಿಕೆಯ ವಸ್ತುಗಳನ್ನು ಪೂರೈಕೆ ಮಾಡುತ್ತಿದ್ದ ವೃತ್ತಿಯವರು. ಈ ಮನೆಯ ಮಗಳು ಶ್ರೀಮತಿ ಗಾಯಿತ್ರಿ ಅವರ ನೆರವಿನಿಂದ ಕೃಷ್ಣರಾಜ ಒಡೆಯರ ಕಾಲದ್ದೆನ್ನಬಹುದಾದ ಭರ್ಜಿಗಳು, ತಾಮ್ರದ ದೊಡ್ಡ ಕಡಾಯ, ಹಂಸಮಾಟದ ಅಲುಗಿರುವ ವಿಶಿಷ್ಟ ರಚನೆಯ ಈಳಿಗೆ ಮಣೆ, ಕಬ್ಬಿಣದ ದೊಡ್ಡ ತಕ್ಕಡಿ, ಸಾಣೆಕಲ್ಲು, ರಾಗಿಕಲ್ಲು, ಮಿಲಿಟರಿ ಟ್ರಂಕು, ಒನಕೆಗಳು, ಪೆನ್‌ಸೋಲಿಗೆ, ಲ್ಯಾಂಪ್‌ಸ್ಟ್ಯಾಂಡಿನ ಗಾಜಿನ ಭಾಗಗಳೇ ಮೊದಲಾದ ವಸ್ತುಗಳನ್ನು ಜಾನಪದ ಲೋಕಕ್ಕೆ ಕೊಡುಗೆಯಾಗಿ ಪಡೆಯಲಾಯಿತು.[೧೩]

ಹಾವೇರಿ ಜಿಲ್ಲೆ ರಾಣೆಬೆನ್ನೂರಿನ ತುಮ್ಮಿನ ಕಟ್ಟೆಯ ಶ್ರೀಮತಿ ಶಾಂತಮ್ಮ ಗುರುಶಾಂತಪ್ಪ ನವಾತಿಯವರ ಹೆಣಿಕೆಯ ಮಲ್ಲಿಗೆ ದುಪ್ಪಟ, ಶ್ರೀಮಲ್ಲಿಕಾರ್ಜುನ ಅವರು ಈ ವಸ್ತುವನ್ನು ತಾರೀಖು ೦೨.೦೪.೨೦೦೪ರಂದು ಜಾನಪದ ಲೋಕಕ್ಕೆ ತಲುಪಿಸಿರುತ್ತಾರೆ. ಕೊಡಗು ಜಿಲ್ಲೆ ಕಣಿವೆ ಗ್ರಾಮದ ಶ್ರೀಮತಿ ಸಾವಿತ್ರಮ್ಮ ಅವರಿಂದ ತಾರೀಖು ೧೨.೦೬.೨೦೦೪ರಂದು ಮರದ ತೊಟ್ಟಿಲು, ಬಳಪದ ಕಲ್ಲಿನ ಮರಿಗೆಗಳನ್ನು ಶ್ರೀ ಆರ್.ಎಲ್. ಜಗದೀಶ್, ಮೋಹನ್, ಶ್ರೀನಿವಾಸ್ ಅವರುಗಳ ನೆರವಿನಿಂದ ಸಂಗ್ರಹಿಸಲಾಯಿತು. ಬೆಂಗಳೂರಿನ ಬನಶಂಕರಿಯ ಶ್ರೀ ಸಿ.ಎ. ಆನಂದ್ ಅವರಿಂದ ಹಿತ್ತಾಳೆ ದೀಪಗಳು, ದಸರಾಗೊಂಬೆಗಳು, ಬಟ್ಟೆ ಕೊಕ್ಕೆ, ಮರದ ಪೆಟ್ಟಿಗೆ ಮೊದಲಾದವುಗಳನ್ನು ತಾರೀಖು ೧೦.೦೭.೨೦೦೪ ರಂದು ಸಂಗ್ರಹಿಸಲಾಯಿತು.

ದೊಡ್ಡಬಳ್ಳಾಪುರದ ಶ್ರೀ ವೆಂಕಟೇಶಪ್ಪ ಅವರಿಂದ ಬಳಪದ ಕಲ್ಲಿನ ಮರಿಗೆ, ಬೆಂಗಳೂರಿನ ಓಬಳಪ್ಪ ಗಾರ್ಡನ್‌ನ ಶ್ರೀ ಜಿ.ಎಸ್.ಎಸ್. ರಾವ್ ಅವರಿಂದ ಬಾಕ್ಸ್‌ಚರಕ, ಬೆಂಗಳೂರಿನ ಶ್ರೀಮತಿ ಯಶೋಧಮ್ಮ ಅವರಿಂದ ಹೆಣಿಕೆ ಚೀಲ, ಹೆಣಿಕೆ ಬಟ್ಟೆ ಮೊದಲಾದವನ್ನು ತಾರೀಖು ೦೧.೧೧.೨೦೦೪ ರಂದು ಸಂಗ್ರಹಿಸಲಾಯಿತು.

ಚನ್ನಪಟ್ಟಣದ ಶ್ರೀಮತಿ ಹೇಮ ನಾಗರಾಜ ಹೊಳ್ಳ ಅವರಿಂದ ಕಬ್ಬಿಣದ ಒಲೆ, ಇದ್ದಿಲ ಒಲೆ, ವಿದ್ಯುತ್ ಒಲೆ, ಅಡಿಗೆ ಕುಕ್ಕರ್‌ಗಳು, ಚನ್ನಪಟ್ಟಣದ ಮಂಗಳವಾರ ಪೇಟೆಯ ಶ್ರೀಮತಿ ಯಶೋದಮ್ಮ, ತಿಮ್ಮೇಗೌಡ ಅವರಿಂದ ಕಬ್ಬಿಣದ ಸ್ಯಾವಿಗೆ ಒರಳನ್ನು ತಾರೀಖು ೦೯.೦೧.೨೦೦೪ರಂದು ಸಂಗ್ರಹಿಸಲಾಗಿದೆ.[೧೪]

### ವಸ್ತುಸಂಗ್ರಹಕ್ಕಾಗ ಮಾಡಿದ ಒಂದು ಶ್ರಮದ ಯಾತ್ರೆ

ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಸುತ್ತಮುತ್ತ ವಸ್ತುಸಂಗ್ರಹಕ್ಕಾಗಿ ಎಚ್.ಎಲ್. ನಾಗೇಗೌಡರು ಇವರ ಜೊತೆಗೆ ಜನಪದ ಗಾಯಕರು ಮತ್ತು ರಂಗಕರ್ಮಿಗಳಾದ ಶ್ರೀ ಹುಚ್ಚಪ್ಪ

ಮಾಸ್ತರರು ಹಾಗೂ ಶ್ರೀ ನಾರಾಯಣಶರ್ಮರವರು, ಸಾಗರ ತಾಲ್ಲೂಕಿನ ಎ.ಪಿ.ಎಂ.ಸಿ.ಯ ಅಧ್ಯಕ್ಷರೂ ಕ್ರಿಯಾಶೀಲರೂ ಆದರ್ಶ ಜೀವಿಗಳೂ ಆದ ಶ್ರೀ ರಾಜಗೋಪಾಲರು, ಟ್ರಸ್ಟಿನ ಕೆ.ವಿ. ಶ್ರೀನಿವಾಸ್ ಎಲ್ಲರೂ ಜೊತೆಗೂಡಿ ಹೊರಟರು.

ತಾರೀಖು ೦೪.೦೪.೧೯೮೮ರಂದು ಸಾಗರ ತಾಲ್ಲೂಕು ಬೇಳೂರು, ಬೆಳೆಯೂರು ಭಾಗದತ್ತ ಹೊರಟೆವು. ಬೇಳೂರಿನ ಶ್ರೀ ಬಿ.ಪಿ. ವೆಂಕಟರಾವ್ ಅವರ ಮನೆಯಿಂದ ಸಂಗ್ರಹಕಾರ್ಯ ಆರಂಭಿಸಿದರು. ಜನಪದ ವಸ್ತುಗಳೇನಾದರೂ ಇದ್ದರೆ ಕೊಡಿ ಎಂದರೆ, ಎಂಥ ವಸ್ತುಗಳೆಂದು ಗೊತ್ತಾಗದೆ ಗೊಂದಲಕ್ಕೊಳಗಾದರು. ನಂತರ ಮನೆಯವರ ಒಪ್ಪಿಗೆ ಪಡೆದು ಅಟ್ಟ ಹತ್ತಿದರು. ಒಂದಲ್ಲ ಎರಡಲ್ಲ ಮೂರನೇ ಅಟ್ಟಕ್ಕೆ ಹೋದಾಗ ಅಲ್ಲಿದ್ದ ಜನಪದ ವಸ್ತುಗಳು ನಮಗಾಗಿ ಕಾದಿದ್ದವು. ಅವುಗಳೆಂದರೆ ೪ ದೀಪದ ಗುಡ್ಡುಗಳು, ೩ ಕಡೆಗೋಲುಗಳು, ಪಟಾಕಿ ಬರುವ ಮೊದಲು ಬಳಸುತ್ತಿದ್ದಿರಬಹುದಾದ ಸಾಧನ ಪೆಟ್ಲು, ಇದು ಸೈಕಲ್ ಪಂಪಿನಂತ ಬಿದಿರಿನ ಕೊಳವೆಗೆ ಒಳಗೆ ಜಮ್ಮನ ಕಾಳು ಹಾಕಿ ಮೇಲಿನ ಒತ್ತು ಕಡ್ಡಿಯನ್ನು ಒಮ್ಮೆಲೆ ಒತ್ತಿದಾಗ ಪಟಾಕಿಯಂತೆ 'ಪಟಾರ್' ಸದ್ದು ಹೊರಡುತ್ತದೆ. ಅಲ್ಲದೆ ಉಜ್ಜುಗೊರಡು, ಕೊಡಲಿ, ಅರಿಗತ್ತಿ, ಹಣಿಗೆಗಳು, ಕುಂಸನಬುಟ್ಟಿ, ಸುಮಾರು ೧೦೦ ವರ್ಷ ಹಳೆಯದ್ದಿರಬಹುದಾದ ಸೂತ್ರದ ಗೊಂಬೆಯ ಸ್ತ್ರೀಮುಖ, ಬಂದ ನೂರಾರು ವರ್ಷಗಳಿಂದ ನಡೆದುಕೊಂಡು ಯಕ್ಷಗಾನದ ತಂಡ ಈ ಊರಲ್ಲಿದ್ದು ಅದರಲ್ಲಿ ಬಳಸುತ್ತಿದ್ದ ಕುದುರೆಮುಖ, ಗಂಗೆಮುಖ, ಮದ್ದಲೆಗೂಡು ಇತ್ಯಾದಿ ವಸ್ತುಗಳನ್ನು ಸಂಗ್ರಹಿಸಲಾಯಿತು.[೧೪]

ಇದೇ ಊರಿನ ಶ್ರೀ ಬಂಗಾರಿ ರಾಮಯ್ಯರ ಅಟ್ಟತಡಕಿ ದೀಪದ ಸ್ಥಂಭಗಳು, ಎಜ್ಜು, ಇಲಿಗತ್ರಿ, ಕಡಕಿನ ಮಣೆ, ಒಡ್ಯಾಣಕುಕ್ಕೇ, ಹಿಂದೆ ಯಕ್ಷಗಾನದಲ್ಲಿ ಬಳಸುತ್ತಿದ್ದ ಗಿಲ್‌ಗಿಲ್ ಸದ್ದು ಮಾಡುವ ಗಿಡಬುಡಿಕೆ, ಮರದ ಪೆಟ್ಟಿಗೆ, ಗೊಟ್ಟ, ಹೆಂಡೆಗೊಡತಿಗಳನ್ನು ಶ್ರೀ ಬಿ.ಆರ್. ಗಣಪತಿ ಅವರ ಮನೆ ಶೋಧಿಸಿ ಯಕ್ಷಗಾನದ ರಾಜವೇಷದ ಕಿರೀಟ, ಮಂದಲಿಗೆ, ಭುಜಕೀರ್ತಿ, ಮುಡಿಗ್ಯಾದಿಗೆ, ಕೈಕಟ್ಟು, ವೀರಗಾಸಿ, ಸರ್ಪಾಸ್ತ್ರ ಇತ್ಯಾದಿಗಳನ್ನು, ಶ್ರೀ ಪೇಟೆ ವೆಂಕಟಗಿರಿಯಪ್ಪರ ಮನೆಯಿಂದ ಇಲಿಗತ್ರಿ, ಲೊಡಗ ಇತ್ಯಾದಿಗಳನ್ನು ಸಂಗ್ರಹಿಸಿಕೊಂಡು ಕೊಟ್ಟಂತ ಮಹಾನಾಯಕರಿಗೆ ಧನ್ಯವಾದ ಹೇಳಿದರು.

ನಂತರ ಬೇಳೂರಿನಲ್ಲಿ ಶ್ರೀ ಸುಬ್ಬರಾಮಯ್ಯ ಲಕ್ಷ್ಮಯ್ಯ ಭಾಗವತರ ಅಟ್ಟ ಹತ್ತಿದರು. ಇದು ಬಹಳ ಕಾಲದಿಂದ ಯಕ್ಷಗಾನದ ಭಾಗವಂತಿಕೆ ಹಾಗೂ ವೇಷಗಳನ್ನು ಸಿದ್ಧಗೊಳಿಸುವ ಕೆಲಸ ಮಾಡಿಕೊಂಡು ಬಂದಿದ್ದ ಮನೆ. ಇಲ್ಲಿ ಕ್ರಿ.ಶ. ೧೯೧೨ರಲ್ಲಿ ಬರೆಯಲ್ಪಟ್ಟ 'ಶಂಬ್ರಾಸುರನ ಕಾಳಗ' ಹಾಗೂ 'ರತಿ ಕಲ್ಯಾಣ' ಮತ್ತಿತರ ಕೈಬರಹದ ಯಕ್ಷಗಾನದ ಹಸ್ತಪ್ರತಿಗಳು, 'ಕರ್ಣಾರ್ಜುನರ ಕಾಳಗ'ದ ಮುದ್ರಿತ ಪ್ರತಿ, ಅಲ್ಲದೆ ಉಪ್ಪಿನ ಕರಡಿಗೆ, ಚನ್ನೆಮಣೆ ಇತ್ಯಾದಿ ವಸ್ತುಗಳನ್ನು, ಶ್ರೀ ಬಿ.ಪಿ. ದೇವಪ್ಪ ಪಟೇಲ್ ಅವರ ಮನೆಯಿಂದ ಬಾಗಮರಿಗೆ, ಚಿಕ್ಕಮರಿಗೆ, ಬೆತ್ತದ ಜುಜಣಿಗೆ, ತಕ್ಕಡಿಯ ಪಲ್ಲಿ ಇತ್ಯಾದಿಗಳನ್ನು ಸಂಗ್ರಹಿಸಲಾಯಿತು.

ನಂತರ ಅಲ್ಲಿಂದ ಹಾಗೆಯೇ ಸಾಗರ ಸಮೀಪದ ಕುಗ್ವೆ ಗ್ರಾಮದಲ್ಲಿ ದೀವರ ಹಬ್ಬಗಳನ್ನು ವೀಡಿಯೋ ಚಿತ್ರೀಕರಣ ಮಾಡಲಾಯಿತು. ಜೊತೆಗೆ ಚಿತ್ರೀಕರಣ ಮಾಡಿಕೊಂಡಿದ್ದ ಹಬ್ಬಗಳ ವೀಡಿಯೋ ಪ್ರದರ್ಶನ ಮಾಡಲಾಯಿತು. ಇದರಿಂದ ಆ ಊರಿನ ಜನರು ತುಂಬಾ ಸಂತಸಗೊಂಡರು. ತದನಂತರ ಗೌಡರು ಅಲ್ಲೆ 'ಜನಪದ ರಂಗ ಸಂಕುಲ' ಎಂಬ ರಂಗಸಂಸ್ಥೆಯನ್ನು ಹುಟ್ಟು ಹಾಕಿದರು.

ಗೌಡರು ಅಲ್ಲಿಂದ ಸಹ ಮಿತ್ರರೊಡನೆ ಕಾಗೋಡಿಗೆ ಹೊರಟರು. ಈ ಊರು 'ಕಾಗೋಡು ಸತ್ಯಾಗ್ರಹ'ದ ಮೂಲಕ ಹೆಸರಾಗಿದ್ದ ಸ್ಥಳ. ಇಲ್ಲಿ ಗೌರಿ ಬಿಡುವ ಹಬ್ಬದ ವಿಡಿಯೋ ಚಿತ್ರೀಕರಣವನ್ನು ಮಾಡಲಾಯಿತು. ಅಲ್ಲಿ ಗೌಡರಿಗೆ ಎಸ್.ಕೆ. ಪುಟ್ಟಪ್ಪರವರು ನೆರವಾದರು. ಇವರು ಹೆಚ್ಚು ಕಡಿಮೆ ಪ್ರತಿ ಮನೆ ಮನೆಗೂ ಕರೆದುಕೊಂಡು ಹೋಗಿ ಹುಡುಕಿಸಿ, ತಡಕಿಸಿ ವಸ್ತುಗಳನ್ನು ಹೊರತೆಗೆಸಿದರು. ಶ್ರೀ ಸಸರಳ್ಳಿ ಈರಪ್ಪರ ಮನೆಯಿಂದ ಗೋರುಬಲೆ, ಮೀನುಗೋರುವ ಮಂಕರಿ, ಬನಿಕಳ್ಳು, ಗೊನೆ ಕೊಯ್ಯುವ ಸಾರಗತ್ತಿ, ನಾಮದ ಬುಟ್ಟಿ, ಕಳಸದ ಹಿಲಿಕೆ, ಸಿಕ್ಕ, ಬಿದಿರಿನ ತೊಟ್ಟಿಲು ಇತ್ಯಾದಿಗಳನ್ನೂ, ಶ್ರೀ ಹಳ್ಳಿಗುಡ್ಡೆ ಕನ್ನಪ್ಪರ ಮನೆಯಿಂದ ಮೊಲದ ಬಲೆ, ಒಕ್ಕಲುತನದ ದಾವಣಿ, ಬಾಯಿಕುಕ್ಕೆ ಇತ್ಯಾದಿ.

ಶ್ರೀ ಕಾನಮನೆ ಚೌಡಪ್ಪರ ಮನೆಯಿಂದ ಕೈಮರಿಗಿ, ಶ್ರೀಮುತ್ತನ ಸೀತಾರಾಮಪ್ಪರ ಮನೆಯಿಂದ ನೆಲತಟ್ಟುವ ಪೆಟ್ನೆ, ಚಕ್ಕಲಿ ಒರಳು, ಮೀನು ಹಿಡಿಯುವ ಮೀನಂಡೆ ಇತ್ಯಾದಿ. ಶ್ರೀ ಬಿಳಿಯನ ಈಶ್ವರಪ್ಪರ ಮನೆಯಿಂದ ಮರಗೋಲು, ಲಟ್ಟಣಿಗೆ, ಪಾವು, ಕಾಡುಕುರಿ ಹೊಡೆಯುವ ಈಟಿ ಇತ್ಯಾದಿಗಳನ್ನು ಹೆಕ್ಕಿ ತೆಗೆಯಲಾಯಿತು. ಶ್ರೀ ಎಸ್.ಕೆ. ಪುಟ್ಟಪ್ಪರ ಮನೆಯಿಂದ ಎತ್ತಿನ ಬಾಸಿಂಗ, ಬತ್ತ ಒಡೆಯುವ ಕಲ್ಲು ಮೊದಲಾದವುಗಳನ್ನು ಸಂಗ್ರಹಿಸಲಾಯಿತು.[೬]

ಕಾಗೋಡಿನಿಂದ ಮಣಗದ್ದೆಗೆ ಹೊರಟಾಗ ರಣರಣ ಬಿಸಿಲು ಅಪರಿಚಯಸ್ಥರನ್ನು ಊರೊಳಗೆ ಸೇರಿಸಿದ ಕರಿಒಕ್ಕಲಿಗರ ಈ ಊರಲ್ಲಿ ಶ್ರೀ ಪುಟ್ಟಪ್ಪರ ಸಹಾಯದಿಂದ ಹಾಗೋ ಹೀಗೋ ಮಾಡಿ ಸಾಕಷ್ಟು ಸಾಮಾನು ಕೂಡಿಸಿದೆವು. ಶ್ರೀ ಮಂಜಪ್ಪರ ಮನೆಯಿಂದ ಮೀನಿನ ಇರಗುಣಿ, ಬಿದಿರಕುಕ್ಕೆ. ಬೀಜಗಳನ್ನು ಹಾಕಿಡುವ ಕಾಯಂಡೆ ಇತ್ಯಾದಿಗಳನ್ನು ಶ್ರೀ ಶಂಕರಪ್ಪರ ಮನೆಯಿಂದ ಬಿದಿರಿನ ದೊಡ್ಡಅಂಡೆ ಶ್ರೀ ಕರಿಯಪ್ಪರ ಮನೆಯಿಂದ ಮೀನುಕುಣಿ, ಶ್ರೀ ದೊಡ್ಮನೆ ಬಸಪ್ಪರ ಮನೆಯಿಂದ ಕಾರೇಡಿ ಕೂಣಿ, ಲೊಡಗ, ಶ್ರೀ ಗಟ್‌ಗಡಿ ಜಟ್ಯಪ್ಪರ ಮನೆಯಿಂದ ಹುರಿ ಹೊಸೆಯುವ ಹುರಿಬಟ್ನ, ಹುಗ್ಗಿಹುಟ್ಟು, ರೊಟ್ಟಿ ತಟ್ಟುವ ಮರಗಿ, ಶ್ರೀ ಸಣ್ಣಮನೆ ಮೈಲಪ್ಪನ ಮನೆಯಿಂದ ಮುಂಡುಗುಕ್ಕೆ, ಶ್ರೀಮತಿ ದೊಡ್ಡಮನೆ ಮಾಸ್ತಮ್ಮರಿಂದ ಮಕ್ಕಳಾಡುವ ಬುಗುರಿ, ಚಾಪೆಚೀಲ, ಶ್ರೀ ಮೇಲುಮನೆ ರಾಮಪ್ಪರಿಂದ ಅರೆಬಿಕ್ ಲಿಪಿಯ ಹಾಗೂ ಮತ್ತಿತರ ಮೂರು ನಾಣ್ಯಗಳನ್ನು, ಹಿಟ್ಟುಂಡೆ ಬುಟ್ಟಿ ಇತ್ಯಾದಿ ಎಲ್ಲಾ ಸಾಮಾನುಗಳನ್ನು ಹಿತ್ತಲು, ಬಾಕಲು, ಅಟ್ಟ ಎಲ್ಲಾ ತಡಕಿ ತಂದದ್ದಾಯಿತು. ಬಿಸಿಲ ಧಗೆಯಿಂದಾಗಿ ಕುಡಿಯಲು ನೀರು ಕೇಳಿದಾಗ ಒಂದು ಮನೆಯ ತಾಯಿ ಬರೀ ನೀರಲ್ಲದೆ ಜೇನು ಬೆಲ್ಲವನ್ನು ಕೊಟ್ಟು ದಣಿವಾರಿಸಿದರು.[೭]

ಯಲಕುಂದ್ಲಿಯಲ್ಲಿ ಶ್ರೀ ಕಾಳೆ ಹುಚ್ಚಪ್ಪರ ಮನೆಯಿಂದ ಬಿದಿರಿನ ಪಟ್ಟೆಗಳಿಂದ ಮಾಡಿದ ವಿಶಿಷ್ಟ ವಾದ ಇಲಿಗತ್ರಿಯನ್ನೂ, ಶ್ರೀ ಹುಚ್ಚಪ್ಪರ ಮನೆಯಿಂದ ಬೇಟೆಯ ಸಮಯದಲ್ಲಿ ಸಂಜ್ಞೆಯಾಗಿ ಬಳಸುವ

ಕುರಿಕೊಂಬಿನಿಂದಾದ ವಾದ್ಯ-ಬೇಟೆ ಅಂಡೆಯನ್ನೂ ಶ್ರೀ ಕೊಂಡ್ಲಿ ಸಣ್ಣಪ್ಪರ ಮನೆಯಿಂದ ಗೋರುಬಲೆಯನ್ನು ಸಂಗ್ರಹಿಸಿದೆವು. ಅಲ್ಲಿಯ ಜನಗಳಿಗೆ ದೇವರ ಮೂರು ಹಬ್ಬಗಳನ್ನು ತೋರಿಸಿದೆವು. ಅಲ್ಲಿಂದ ಹಿರೇನಲ್ಲೂರಿಗೆ ಬಂದಾಗ ದೇವರ ಹಬ್ಬಗಳ ವೀಡಿಯೋ ನೋಡಲು ಊರಿಗೆ ಊರೇ ಕಿತ್ತು ಬಂದಿತ್ತು. ಅಲ್ಲಿ ತೋರಿಸಿ ರಾತ್ರಿ ಒಂಬತ್ತೂವರೆ ವೇಳೆಗೆ ಕಾಗೋಡಿಗೆ ಬಂದು ರಾತ್ರಿ ವೀಡಿಯೋ ತೋರಿಸಲಾಯಿತು. ಊರಿನ ಜನಕ್ಕೆ ತುಂಬಾ ಖುಷಿಯಾಯಿತು.

ತಾರೀಖು ೦೭.೦೫.೮೮ ರಂದು ಹೊಸನಗರ ತಾಲ್ಲೂಕಿನತ್ತ ಪ್ರಯಾಣ. ಮೂಡುಬಾಗಿಲು ಗ್ರಾಮಕ್ಕೆ ಬಂದು ಶ್ರೀ ಎಂ.ಆರ್. ರಾಮಚಂದ್ರರಾವ್ ಅವರ ಭೇಟಿಯಾಗಿ ಇವರಿಂದ ಒಂದು ಓಲೆಗರಿಕಟ್ಟು, ಚಂದನದ ೩ ಗೊಂಬೆಗಳು, ನಳಗ, ಕಲ್‌ಗಡಿಗೆ ಇತ್ಯಾದಿಗಳನ್ನು ಶ್ರೀ ಎಂ.ಎಸ್. ರಾಮಸ್ವಾಮಿಯವರಿಂದ ಅಳತೆ ಸಾಧನ ಇತ್ಯಾದಿಗಳನ್ನು ಸಂಗ್ರಹಿಸಿಕೊಂಡು ನೆಲ್ಲುಂಡೆಗೆ ಬರಲಾಯಿತು. ಅಲ್ಲಿಂದ ಶ್ರೀ ಎನ್.ಎನ್. ರಾಮಚಂದ್ರರಾವ್ ಮನೆಯಲ್ಲಿ ಊಟ ಮಾಡಿ ಅಲ್ಲಿ ಕೈಬಾಕು, ಈಟಿ, ಸಾಂಬಾರ ಮರಿಗೆ, ವಿಭೂತಿ ಮರಿಗೆ, ಎಸಮುಚ್ಚ, ಪಾವು, ಡಡೆಕಲ್ಲು, ಗರಟದ ಕುಕ್ಕೆ ಇತ್ಯಾದಿಗಳನ್ನು ಎತ್ತಿಕೊಂಡು ಹೊರಡಲಾಯಿತು.

ಆನಂತರ ಶ್ರೀ ಎಸ್. ಸೀತಾರಾಮ ಉಡುಪರ ಅಟ್ಟಬೆಟ್ಟ, ತಡಕಾಡಿ ಗೋಡೆಗೆ ಸಿಕ್ಕಿಸುವ ಕಾಡುಕೋಣದ ಮುಖ, ಜಿಂಕೆಕೋಡು, ಮರದ ಚಿತ್ತಾರದ ಹಸೆಮಣೆ, ಗರಡಿಕಲ್ಲು, ಹಿತ್ತಾಳೆಯ ಸಣ್ಣ ನವಿಲು ಮತ್ತು ಗಿಂಡಿಗಳನ್ನು ಸಂಗ್ರಹಿಸಿಕೊಂಡು ಸಂಜೆ ವೇಳೆಗೆ ಯಡೂರು ತಲುಪಿದರು. ಅಲ್ಲಿರುವ ತೀರ್ಥಹಳ್ಳಿ ತಾಲ್ಲೂಕಿನ ಅಮತಿ ಎಂಬ ಊರಿಗೆ ಹೋಗಿ ಅಲ್ಲಿ ದೇವಪ್ಪಗೌಡರ ಮನೆಯ ಅಟ್ಟವನ್ನು ತಡಕಿ ನೊಗ, ಮರದ ಮರಗಿ, ಪಿಠಾರಿ, ಬಳುವಳಿ ಸೊಟಗ, ಕೈಬಟ್ಲು, ಕಬ್ಬಿನಗಾಣದಲ್ಲಿ ಬಳಸುವ ಬೆಲ್ಲದ ರಾಟೆ, ಪೀಕುದಾನಿ, ದೀಪಾರ್ತಿ, ಚಪಾತಿಮಣೆ, ಕಲ್‌ಬಾನಿ, ದಡೆಕಲ್ಲು ಇತ್ಯಾದಿ ಸಂಗ್ರಹಿಸಿ ಹಾರೋಗೊಳಿಗೆ ಹೋಗಲಾಯಿತು. ಅಲ್ಲಿ ಹೆಚ್.ಎಸ್. ಬಸಪ್ಪ ಅವರ ಮನೆಗೆ ಹೋಗಿ ಬೆತ್ತದ ಬುಟ್ಟಿ, ಕಟ್ಲೆ ಬೀಜದ ಬುಟ್ಟಿ, ಚಕ್ಕುಲಿ ಒರಳು ಇತ್ಯಾದಿಗಳನ್ನು ಶ್ರೀಮತಿ ಪ್ರಮೀಳ ಅವರ ಸಹಾಯದಿಂದ ಸಂಗ್ರಹಿಸಲಾಯಿತು. ಅದೇ ಊರಿನ ಶ್ರೀ ದುಗ್ಗಣಗೌಡರಿಂದ ಉಗ್ಗುದ ಬುಟ್ಟಿ, ಸೊಟಗ, ತೊಲದ ಕಲ್ಲುಗಳು, ಗೆರಸಿ ಇತ್ಯಾದಿ ಸಂಗ್ರಹಿಸಿ ಸಾಗರದ ಕಡೆಗೆ ಗೌಡರು ಸಹ ಮಿತ್ರರೊಡನೆ ಹೊರಟರು.

ತದನಂತರದಲ್ಲಿ ಸಾಗರ ತಾಲ್ಲೂಕಿನ ಕಣ್ಣೂರು ಗ್ರಾಮದಲ್ಲಿ ಶ್ರೀ ಬಸವೇಣ್ಯಪ್ಪರ ಮನೆಯಿಂದ ಹೂಬುಟ್ಟಿ, ಶ್ರೀ ಸಾರೆಕೊಪ್ಪದ ಹುಚ್ಚರಾಯಪ್ಪರ ಮನೆಯಿಂದ ತೊಟ್ಟಿಲ ಹಗ್ಗ, ಸುಣ್ಣಕಾಯಿ ಡಬ್ಬಿ, ಗೊಣಪೆಕಾಯಿ ಇತ್ಯಾದಿಗಳನ್ನು, ಶ್ರೀ ಕರಿಬಸಪ್ಪ ನಿಚಡಿ ಅವರ ಮನೆಯಿಂದ ಚನ್ನೇಮಣೆ, ಗಾಜಿನಚಂಬು, ಬತ್ತದಗೂಡು, ಶ್ರೀ ಭರಮಪ್ಪರ ಮನೆಯಿಂದ ಮೊಲದ ಬಲೆ, ಶ್ರೀ ಮಡಿವಾಳರ ಭರಮಪ್ಪರಿಂದ ದಾವಣಿ ಬಳೆ, ಮರದ ಕುಡಿಕೆ, ಶ್ರೀ ಸಂಪೆಕಾರ ಚೌಡಪ್ಪರಿಂದ ಬತ್ತದ ಗೂಡು, ಹುಂಡಗೋಳಿ ಬಲೆ, ಶ್ರೀ ತಳವಾರರ ರಾಮಪ್ಪನ ಮನೆಯಿಂದ ಜೀರಿಗೆ ಮಣೆ, ಶ್ರೀ ಸಂಗಿಟೀಕಪ್ಪರಿಂದ ಹೆಂಡೆಗೊಡತಿ, ಶ್ರೀ ಸಂಪೆಕಾರ ಶಾಂತಪ್ಪರಿಂದ ಬತ್ತಿಕಲ್ಲಿ, ಸಿದ್ದೆ, ನಿಂಗಪ್ಪರ ಮನೆಯಿಂದ ಮೀನುಬಲೆ, ಬಣ್ಣದ ಇರಿಕೆ,

ಶ್ರೀ ಸಾರೆಕೊಪ್ಪದ ಹುಚ್ಚಪ್ಪರಿಂದ ಪಡ್ಡಿನ ಹಂಚು, ಗುದ್ಲಿ, ಗೊಟ್ಟ, ಹುಟ್ಟು ಇತ್ಯಾದಿಗಳನ್ನು ಶ್ರೀ ತುಪ್ಪೂರು ನಾರಾಯಣಪ್ಪರಿಂದ ಸಿಕ್ಕ, ಶ್ರೀ ಸಂಪೆಕಾರ ಹುಚ್ಚಪ್ಪರಿಂದ ಅನ್ನ ಬಸಿಯುವ ಮರಗಿ ಮುಂತಾದವುಗಳನ್ನು ಸಂಗ್ರಹಿಸಲಾಯಿತು. ನಂತರ ಟಾಕೆಪ್ಪರ ಮನೆಯಲ್ಲಿ ಊಟ ಮಾಡಿ ಅಲ್ಲಿನ ಕೂರಿಗೆ, ಕೊಳಗ, ಸಂಗ್ರಹಿಸಲಾಯಿತು.

ನಾಗೇಗೌಡರು ಹಾಗೂ ಹುಚ್ಚಪ್ಪ ಮಾಸ್ತರು ಜೊತೆಗೆ ಸಂಗಡಿಗರು ಸೇರಿ ಗೌತಮಪುರಕ್ಕೆ ಹೊರಟರು. ಅಲ್ಲಿ ಶ್ರೀ ಸಾಲೂರು ಮಂಜಪ್ಪರ ಮನೆಯಿಂದ ಜಿಂಕೆ ಕೊಂಬನ್ನೂ, ಶ್ರೀ ಕಡಗದ್ದೆ ಹುಚ್ಚಪ್ಪರಿಂದ ಅಚ್ಚೇರನ್ನೂ, ಶ್ರೀ ಹುನುವಳ್ಳಿ ಕರಿಯಪ್ಪರಿಂದ ವಿಶಿಷ್ಟವಾದ ಆರು ಅಡಿ ಉದ್ದದ ಮೀನು ಹಿಡಿಯುವ ಬಿದಿರಿನ ಇಳಿಗುಣಿಯನ್ನೂ, ಹಳೆಯ ಕಾಲದ ರಾಜ ಭರ್ಜಿಯನ್ನೂ, ಶ್ರೀ ಲಿಂಗಪ್ಪರಿಂದ ಚಿಗರಿಕೊಂಬು, ಮಡಿಚಬಹುದಾದ ಬಟ್ಟೆಸ್ಟ್ಯಾಂಡನ್ನು, ಶ್ರೀ ಸಾಲೂರು ಹಾಲಪ್ಪರಿಂದ ಕಾನಕುರಿಕೊಂಬು, ಶ್ರೀ ಯೋಮಕೇಶ್ವರಪ್ಪರಿಂದ ಐದು ಹೆಡೆಯ ಹಿತ್ತಾಳೆಯ ಸರ್ಪಾರತಿ, ಶ್ರೀ ಸಂಸಾಳರ ಮಂಜಪ್ಪರಿಂದ ಜಬ್‌ಮೀನು ಬಲೆ ಇತ್ಯಾದಿಗಳನ್ನು ಸಂಗ್ರಹಿಸಲಾಯಿತು.

ಗೌಡರು ಅಲ್ಲಿಂದ ತೆಲಂಗಾರ್ ಗ್ರಾಮಕ್ಕೆ ಬಂದರು. ಅಲ್ಲಿ ರಾಮಕೃಷ್ಣ ಭಾಗವತರಿಂದ ಯಕ್ಷಗಾನ ಮತ್ತಿತರ ಹಸ್ತಪ್ರತಿ ಹಾಗೂ ದನಗಳ ಕೊರಳಿಗೆ ಕಟ್ಟುವ ಗಂಟೆಯನ್ನು, ಶ್ರೀರಾಮಚಂದ್ರ ಸುಬ್ರಾಯಭಟ್ಟ ರಿಂದ ಅಡುಕೊಕ್ಕೆ, ಕಬ್ಬಿಣದ ಸೌಟು, ಶ್ರೀ ತಮ್ಮಯ್ಯ ಗೋಪಾಲ ಭಾಗವತರಿಂದ ಸಾಂಬಾರ ಬಟ್ಟಲು ತೆಗೆದುಕೊಂಡು ಅಲ್ಲಿ ಸಿಕ್ಕ ಹಲಸಿನ ಹಣ್ಣನ್ನು ತಿಂದು ಜಾನಪದ ಲೋಕದಲ್ಲಿ ನೆಡಬೇಕೆಂದು ಹಲಸಿನ ಬೀಜಗಳನ್ನು ತಮ್ಮೊಡನೆ ತೆಗೆದುಕೊಂಡರು.

ಗೌಡರು ಅಲ್ಲಿಂದ ಮಳವಳ್ಳಿಗೆ ವಸ್ತುಸಂಗ್ರಹಕ್ಕೆ ಹೊರಟರು. ತಾರೀಖು ೧೦.೦೫.೮೮ರಂದು ಯಲ್ಲಾಪುರದಿಂದ ತಾಳಗುಪ್ಪಕ್ಕೆ ಬಂದರು. ಅಲ್ಲಿ ಶ್ರೀ ನಾಗಪ್ಪರಿಂದ ಮೀನುಬಲೆ, ಬೇಸಾಯದ ಉಪಕರಣಗಳು ಇತ್ಯಾದಿಗಳನ್ನು ಸಂಗ್ರಹಿಸಿ ಅಲ್ಲಿಂದ ಬೆಂಗಳೂರಿಗೆ ಬಂದರು. ಈ ಸಂಗ್ರಹ ಕಾರ್ಯದಲ್ಲಿ ನಾಗೇಗೌಡರಿಗೆ ಬೆನ್ನೆಲುಬಾಗಿ ಸಹಕರಿಸಿದವರು ಒಬ್ಬೊಬ್ಬರಲ್ಲ. ಆದರೆ ಮುಖ್ಯವಾಗಿ ಈ ಎಲ್ಲಾ ವ್ಯವಸ್ಥೆ ಮಾಡಿದ ಶ್ರೀ ಹುಚ್ಚಪ್ಪ ಮಾಸ್ತರರು, ಶ್ರೀ ರಾಜಗೋಪಾಲ್ ಮತ್ತಿತರರನ್ನು ಮರೆಯಲಾಗದು. ಜೊತೆಗೆ ಕುರುವ ಬಸವರಾಜ್, ಚಕ್ಕರೆ ಶಿವಶಂಕರ್, ಮೊದಲಾದವರು ಸಹಕರಿಸಿದರು.[೨೮]

ಈ ವಸ್ತುಗಳನ್ನು ರಾಮನಗರದ ಬಳಿಯ ಜಾನಪದ ಲೋಕಕ್ಕೆ ಸಾಗಿಸಲು ಕರ್ನಾಟಕ ವಿದ್ಯುಚ್ಛಕ್ತಿ ನಿಗಮ ಚಕ್ರಾ ಪ್ರಾಜೆಕ್ಟ್‌ನ ಲಾರಿಗಳ ಸಹಾಯ ಕೋರಲಾಯಿತು. ಕೆ.ಪಿ.ಸಿ.ಯ ಮ್ಯಾನೇಜಿಂಗ್ ಡೆರೆಕ್ಟರ್ ಶ್ರೀ ಎಂ.ಬಿ. ಪ್ರಕಾಶ್ ಹಾಗೂ ಶ್ರೀ ರಂಗನಾಥ್, ಶ್ರೀ ರಾಮಚಂದ್ರರಾವ್, ಶ್ರೀ ಎಂ.ಟಿ. ಪಾಟೀಲ್ ಅವರು ತುಂಬಾ ಸಹಕರಿಸಿ ಲಾರಿಯ ಅನುಕೂಲ ಮಾಡಿಕೊಟ್ಟರು.

### ವಸ್ತುಸಂಗ್ರಹ

ಬೆಂಗಳೂರಿನ ಗಂಗಾನಗರದ ಹಿರಿಯರಾದ ಶ್ರೀ ಸಂಪಂಗಿ ರಾಮಯ್ಯ ಅವರು ಜಾನಪದ ಲೋಕದ ವಸ್ತುಸಂಗ್ರಹಾಲಯಕ್ಕೆ ದಿನಾಂಕ ೩೦.೧೧.೦೫ರಂದು ಕಡಜನಗೂಡನ್ನು ಕೊಡುಗೆಯಾಗಿ ನೀಡಿದ್ದಾರೆ.

ಶ್ರೀ ಆದಿಚುಂಚನಗಿರಿ ಮಠದ ಹಿರಿಯ ಸ್ವಾಮೀಜಿಯವರು ಕಬ್ಬಿಣದ ಬೇರಿಂಗ್ ಇರುವ ರಾಗಿ ತೂರುವ ಯಂತ್ರವನ್ನು ಜಾನಪದ ಲೋಕಕ್ಕೆ ಕೊಟ್ಟಿದ್ದಾರೆ. ಒಂದೆಡೆಯಿಂದ ಕಾಳಿನ ಹುಲ್ಲನ್ನು ತೂರಿಸಿದರೆ ಕಾಳು-ಹುಲ್ಲು ಬೇರ್ಪಡಿಸಿ ಕೊಡುವಂತಿರುವ ಕೈಯಂತ್ರ ಇದು. ಈಗ ಪ್ರದರ್ಶನದಲ್ಲಿದೆ.

ಚನ್ನಪಟ್ಟಣ ತಾಲ್ಲೂಕು ಕೋಡಂಬಳ್ಳಿಯ ಊರಿನ ಹಿರಿಯರಾದ ರಾಮಣ್ಣ ಮೇಸ್ತ್ರು, ಪಟೇಲ್ ತಿಮ್ಮೇಗೌಡರು ಸುಂದರ ಬಸವನ ಮೂರ್ತಿಯ್ನು ಜಾನಪದ ಲೋಕಕ್ಕೆ ನೀಡಿದ್ದಾರೆ.[೧೯]

**ಮತ್ತಷ್ಟು ವಸ್ತುಗಳು ಜಾನಪದ ಲೋಕಕ್ಕೆ**

ಜನಪದರ ಬದುಕಿನ ಭಾಗವಾಗಿದ್ದ, ಭಾಗವಾಗಿರುವ ಸಾವಿರ ಸಾವಿರ ವಸ್ತುಗಳು ಜಾನಪದ ಲೋಕದ ಭಂಡಾರ ಸೇರಿವೆ ಮತ್ತು ಮತ್ತಷ್ಟು ವಸ್ತುಗಳು ಸೇರುತ್ತಲಿವೆ. ನಂಜನಗೂಡು ತಾಲ್ಲೂಕು ತಾಯೂರಿನ ಶ್ರೀಮತಿ ಪುಷ್ಪ ಪರಶಿವಮೂರ್ತಿ ಅವರಿಂದ ತಾರೀಖು ೦೬.೦೫.೨೦೦೬ರಂದು ಐವತ್ತು ನೂರು ವರ್ಷಗಳ ಹಿಂದೆ ಮಕ್ಕಳ ಆಟಿಕೆ ವಸ್ತುಗಳಾಗಿ ಬಳಸುತ್ತಿದ್ದ ಚಿಕ್ಕಗಾತ್ರದ ಹಿತ್ತಾಳೆ ಬಿಂದಿಗೆ, ತಂಬಿಗೆ, ಕುಂಕುಮ ಬಟ್ಟಲು, ನೀರಿನಗಿಂಡಿ, ತುಪ್ಪದ ಗಿಂಡಿ, ಸುಣ್ಣದ ಡಬ್ಬಿ, ರೈಲುಚಂಬು, ಮಂಗಳಾರತಿ ತಟ್ಟೆ ಹಾಗೂ ಮರದ ಚಕ್ಕಲಿ ಒರಳುಗಳನ್ನು ಸಂಗ್ರಹಿಸಲಾಯಿತು. ಬೆಂಗಳೂರಿನ ಸಿರಿಭವನ ಕೋರಿಕೆಗೆ ಓಗೊಟ್ಟು ಶ್ರೀ ಭಟ್ ಎಂಬುವರು ದೊಡ್ಡವಾದ ಎರಡು ಪಟ್ಟದ ಗೊಂಬೆಗಳನ್ನು ಒಳಗೊಂಡು ಸಾಕಷ್ಟು ದಸರಾ ಗೊಂಬೆಗಳನ್ನು ಕೊಟ್ಟಿದ್ದಾರೆ.[೨೦]

ಜಾನಪದ ಲೋಕದ ಮೇಲಿನ ಪ್ರೀತಿಯಿಂದ ಪಶ್ಚಿಮ ಬಂಗಾಳ ಮೂಲದ ಶ್ರೀ ಅಯೋಮನ್ ರಾಯ ಮತ್ತು ಅವರ ತಾಯಿ ಶ್ರೀಮತಿ ಕಲ್ಪನಾ ಚೌಧರಿ ಅವರು ಪಶ್ಚಿಮ ಬಂಗಾಳ ಭಾಗದ ಪ್ರಸಿದ್ಧ ಜನಪದ ಹಾಡುಮೇಳ ಚೌಲ್‌ನ ವಾದ್ಯಗಳಾದ ಏಕತಾರಿ ಚೌಡಿಕೆ ಹೋಲುವ 'ಏಕತಾರ'- ಬಾರಿಕೆ ಗುಣಿಬಾರಿಕೆ ಆಕಾರದ 'ಗುಬ್‌ದುಬಿ' ವಾದ್ಯಗಳನ್ನು ತಾರೀಖು ೧೨.೦೬.೨೦೦೬ರಂದು ನೀಡಿದರು.[೨೧]

**ಜಾನಪದ ಲೋಕದ ವಸ್ತುಸಂಗ್ರಹಾಲಯಕ್ಕೆ ಮತ್ತಷ್ಟು ವಸ್ತುಗಳು**

ದಿನೇ ದಿನೇ ಜಾನಪದ ಲೋಕವನ್ನು ನೋಡಲು ಬರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಹಾಗೆಯೇ ಲೋಕದ ವಸ್ತುಸಂಗ್ರಹಕ್ಕೆ ಮತ್ತಷ್ಟು ವಸ್ತುಗಳು ಸೇರುತ್ತಲೇ ಇವೆ. ಹಳದಿಯ ಬಟ್ಟೆಗೆ ಜೋಡಿಸಿದ ಚಿಕ್ಕ ಚಿಕ್ಕ ಕನ್ನಡಿಗಳು, ಕೆಂಪು ಹಸಿರು ದಾರದ ಹೆಣಿಕೆಯೊಂದಿಗಿನ ಕಸೂತಿ ಕೋಟು ಜಾನಪದ ಲೋಕದ ವಸ್ತುಸಂಗ್ರಹಾಲಯಕ್ಕೆ ಸೇರಿವೆ. ಬೆಂಗಳೂರು ಯಲಹಂಕ ಬಳಿಯ ಕೊಡಿಗೇಹಳ್ಳಿಯ ಶ್ರೀ ಕೆ.ಪಿ. ನಟರಾಜ್ ಅವರು ಒಕ್ಕಣೆಯ ದೊಡ್ಡ ಕಲ್ಲುಗುಂಡು, ಕನಕಪುರ ತಾಲ್ಲೂಕು ವಿಶ್ವಕರ್ಮ ಸಮಾಜದವರು ಕಲ್ಲಿನ 'ವಿಶ್ವಕರ್ಮ' ವಿಗ್ರಹವನ್ನು ನೀಡಿದ್ದಾರೆ. ಕನಕಪುರದ ವಿಧಾನಪರಿಷತ್ ಸದಸ್ಯರಾದ ಶ್ರೀ ಎಸ್. ರವಿ ಅವರ ಪ್ರೋತ್ಸಾಹದಿಂದ ಕ್ರಿ.ಶ. ೧೫೦೦ ಕಾಲದ ಭಿನ್ನಗೊಂಡ ಶ್ರೀರಂಗನಾಥ ಶಿಲಾವಿಗ್ರಹ, ಬೆಂಗಳೂರಿನ ಜಾಕ್‌ಫ್ರೂಟ್ಸ್‌ನ್ ಶ್ರೀಮತಿ ಅನ್ನಪೂರ್ಣ ಅವರಿಂದ ಕೇರುವ ಮೊರ, ಗುಂಡು ಮೊರ, ಚನ್ನಪಟ್ಟಣ ತಾಲ್ಲೂಕು ಲಕ್ಷ್ಮೀಪುರದ ಶ್ರೀಮತಿ ಕಣಿಚಿಕ್ಕ ತಾಯಮ್ಮನವರಿಂದ ಕಣಿ

ಹೇಳುವಾಗ ನುಡಿಸುವ ಕಬ್ಬಿಣದ 'ಕಣಿಗಗ್ಗರೆ' ಕೊಡುಗೆಯಾಗಿ ಬಂದಿದೆ. ಕೋಲಾರದ ರಾಮಪ್ಪ ಅವರು ಸುಂದರ ಅಲಂಕಾರದ ಗೊಂಡೆ ಅಳವಡಿಸಿದ ಕೊಳಲನ್ನು ಜಾನಪದ ಲೋಕದ ವಸ್ತುಸಂಗ್ರಹಾಲಯಕ್ಕೆ ಕೊಟ್ಟಿದ್ದಾರೆ. ರಾಮನಗರ ತಾಲ್ಲೂಕು ಹುಣಸನಹಳ್ಳಿಯಿಂದ ಎರಡು 'ತುರುಗೋಳ್' ಕಲ್ಲುಗಳು ಸೇರಿವೆ. ಸಾಗರ ತಾಲ್ಲೂಕು ಅಂಬಾಪುರ ಕುಗ್ವೆಯ ಮಲ್ನಾಡ ಟ್ರೈಬಲ್ ಕ್ರಾಫ್ಟ್ ಅಂಡ್ ಕಲ್ಚರ್ ಸೆಂಟರ್‌ನ ಶಿವಾನಂದ ಅವರಿಂದ ದೇವರ ಜನಾಂಗದ ಮಹಿಳೆಯರು ಮದುವೆ ಮತ್ತು ಹಬ್ಬ-ಹರಿದಿನಗಳಲ್ಲಿ ಗೋಡೆಗಳ ಮೇಲೆ ಚಿತ್ತಾರ ಮಾಡುವ ಹಸಗೋಡೆ ಚಿತ್ತಾರ, ತಿರುಗೆಮಣಿ ಚಿತ್ತಾರ, ಚಿನ್ನಾಣಿ ಚಿತ್ತಾರಗಳ ಪ್ರಾತಿನಿಧಿಕ ಚಿತ್ರಪಟಗಳು ಜಾನಪದ ಲೋಕ ಸೇರಿವೆ. ಹೀಗೆ ವಸ್ತುಗಳು ಆಗಾಗ್ಗೆ ಸೇರುತ್ತಲೇ ಇವೆ. ಲೋಕದ ವಸ್ತುಗಳ ಭಂಡಾರ ಬೆಳೆಯುತ್ತಿದೆ. ಇವು ತಾರೀಖು ೧೨.೦೬.೨೦೦೬ರಿಂದ ೦೩.೦೩.೨೦೦೭ರ ಅವಧಿಯಲ್ಲಿ ಸಂಗ್ರಹಗೊಂಡ ವಸ್ತುಗಳು.[೨೨]

### ೨.೧. ಜಾನಪದ ಲೋಕ ಹಾಗೂ ಎಚ್.ಎಲ್. ನಾಗೇಗೌಡರು

ಜಾನಪದ ಲೋಕ ಹಾಗೂ ನಾಗೇಗೌಡರ ನಡುವಿನ ಸಂಬಂಧ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಜಾನಪದ ಲೋಕದ ಶ್ರೇಯೋಭಿವೃದ್ಧಿಗೆ ಹಗಲಿರುಳು ದುಡಿದ ಮಹಾನ್ ಜಾನಪದ ತಜ್ಞರು ಡಾ. ಎಚ್.ಎಲ್. ನಾಗೇಗೌಡರು.

೧೯೧೫ರ ಫೆಬ್ರವರಿ ೧೧ರಂದು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಹೆರಗನಹಳ್ಳಿ ದೊಡ್ಡಮನೆ ಕುಟುಂಬದಲ್ಲಿ ಜನಿಸಿದರು. ತಂದೆ ದೊಡ್ಡಮನೆ ಲಿಂಗೇಗೌಡರು ತಾಯಿ ಹುಚ್ಚಮ್ಮ ತಾಯಿ. ಇವರದು ಸಂಖ್ಯಾಬಲದಿಂದಲ್ಲದೆ ಗುಣ, ಆಸ್ತಿ-ಪಾಸ್ತಿ, ಸಂಸ್ಕೃತಿಗಳ ಲೆಕ್ಕದಲ್ಲೂ ದೊಡ್ಡಮನೆಯೆ ಆಗಿತ್ತು. ಬಾಲ್ಯದಿಂದಲೇ ಜಾನಪದದ ಬಗ್ಗೆ ಹೆಚ್ಚಿನ ಆಸಕ್ತಿ ಹೊಂದಿದ್ದ ಗೌಡರು ಬಾಲ್ಯದಲ್ಲಿ ಜನಪದ ಹಾಡುಗಳನ್ನು ಕೇಳುತ್ತಾ ಆ ಕಡೆಗೆ ಆಕರ್ಷಿತರಾದರು.[೨೩]

ರೆವನ್ಯೂ ಪ್ರೊಬೇಶನರಾಗಿ, ಡೆಪ್ಯೂಟಿ ಕಮೀಷನರಾಗಿ, ಲೇಬರ್ ಕಮೀಷನರಾಗಿ, ಕರ್ನಾಟಕ ಲೋಕಸೇವಾ ಆಯೋಗದ ಸದಸ್ಯರಾಗಿ ಉನ್ನತ ಅಧಿಕಾರ ಸ್ಥಾನಗಳಲ್ಲಿದ್ದು ಕಾರ್ಯವನ್ನು ನಿರ್ವಹಿಸಿದರೂ ಜಾನಪದ ಪ್ರೀತಿ ಇವರನ್ನು ಬಿಡಲಿಲ್ಲ. ಈ ಉನ್ನತಾಧಿಕಾರಗಳನ್ನು ಸಂಸ್ಕೃತಿ ಸಂರಕ್ಷಣೆಗೆ ಜಾನಪದ ಪ್ರೀತಿಗೆ ಬಳಸಿಕೊಂಡರು.

ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಯಾಗಿದ್ದಾಗ ಇವರು ಮಾಡಿದ ದೊಡ್ಡ ಕೆಲಸವೆಂದರೆ ಲಿಂಗನಮಕ್ಕಿ ಅಣೆಕಟ್ಟಿನಲ್ಲಿ ಮುಳುಗುತ್ತಲಿದ್ದ ಸಾವಿರಾರು ಮನೆ-ದೇವಾಲಯಗಳಿಂದ ಸಂರಕ್ಷಣೆಗೆ ಯೋಗ್ಯವೆನಿಸಿದ ವಸ್ತುಗಳನ್ನು ತಂದು ವಸ್ತುಸಂಗ್ರಹಾಲಯದಲ್ಲಿರಿಸಿದರು. ಮಂಗಳೂರಿಗೆ ವರ್ಗವಾಗಿ ಬಂದ ಮೇಲೆ ಎರಡನೆಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನವನ್ನು ಮಂಗಳೂರಿನಲ್ಲಿ ನಡೆಸಿದರು.

೧೯೭೩ರಲ್ಲಿ ನಿವೃತ್ತರಾದ ಮೇಲೆ ಎಚ್.ಎಲ್. ನಾಗೇಗೌಡರು ತಮ್ಮನ್ನು ತಾವು ಜಾನಪದಕ್ಕೆ ಅರ್ಪಿಸಿಕೊಂಡರು. ನಾಗೇಗೌಡರು ನಿವೃತ್ತಿಗೊಂಡ ಸಂದರ್ಭದಲ್ಲಿ ಇವರಿಗೆ ಸಾರ್ವಜನಿಕ ಸನ್ಮಾನ

ನಡೆದು ಒಂದು ಲಕ್ಷ ರೂಪಾಯಿ ನಿಧಿ ಅರ್ಪಿಸಿದರು. ನಾಗೇಗೌಡರು ಜಾನಪದಕ್ಕೆ ಬಳಸುವ ಇಚ್ಛೆಯಿಂದ ಇದನ್ನು ಮೂಲನಿಧಿಯನ್ನಾಗಿಸಿ 'ಎಚ್.ಎಲ್. ನಾಗೇಗೌಡ ಟ್ರಸ್ಟ್' ಸ್ಥಾಪಿಸಿದರು ಮುಂದೆ ಅದು 'ಕರ್ನಾಟಕ ಜಾನಪದ ಟ್ರಸ್ಟ್' ಎಂದಾಗಿ ತರುವಾಯದ ದಿನಗಳಲ್ಲಿ ಅದು 'ಕರ್ನಾಟಕ ಜಾನಪದ ಪರಿಷತ್' ಎಂದಾಯಿತು.[೨೪]

ಈ ಸಂಸ್ಥೆಯ ಮೂಲಕ ಎಚ್.ಎಲ್. ನಾಗೇಗೌಡರು ಕನ್ನಡ ಜಾನಪದಕ್ಕೆ ಮಾಡಿದ ಕೆಲಸ ಉಲ್ಲೇಖಾರ್ಹವಾದುದು. ಜನಪದ ಹಾಡು-ಕಥೆಗಳ ಸಂಗ್ರಹ, ಧ್ವನಿಮುದ್ರಣ, ಜನಪದ ಕಲೆಗಳ ವೀಡಿಯೋ ಚಿತ್ರೀಕರಣ, ಜಾನಪದ ಕಲಾವಿದರ ಸಂದರ್ಶನ ಮುಂತಾಗಿ ಹಲವು ಹತ್ತು ಯೋಜನೆಗಳನ್ನು ಹಮ್ಮಿಕೊಂಡು ಈ ಸಂಸ್ಥೆ ಜಾನಪದಕ್ಕಾಗಿ ದುಡಿಯುತ್ತಾ ಬಂದಿದೆ.

"ಕರ್ನಾಟಕ ಜಾನಪದ ಟ್ರಸ್ಟ್"ನಿಂದ ಹೊರಡುತ್ತಿರುವ 'ಜಾನಪದ ಜಗತ್ತು' ಜಾನಪದಕ್ಕೆ ಮೀಸಲಾದ ಪತ್ರಿಕೆಯಾಗಿದ್ದು ಸಾವಿರಾರು ಮೌಲಿಕ ಲೇಖನಗಳನ್ನು ಇದುವರೆಗೆ ಪ್ರಕಟಿಸುತ್ತಿದೆ. ಸಂಗಡವೇ ಬಹುಮುಖ್ಯವೆನಿಸುವುದು ಕರ್ನಾಟಕದಾದ್ಯಂತ ಚದುರಿದ ಜಾನಪದ ಲೇಖಕರನ್ನು ಇದು ಪರಿಚಯಿಸಿದೆ. 'ಕರ್ನಾಟಕ ಜಾನಪದ ಪರಿಷತ್'ನಿಂದಲೇ ೧೯೯೪ರಲ್ಲಿ ಉದಯಗೊಂಡ 'ಜಾನಪದ ಲೋಕ' ಈಗ ಜಾನಪದ ಆಸಕ್ತರನ್ನು ಆಕರ್ಷಿಸುತ್ತಿದೆ.

ಬೆಂಗಳೂರು ಸಮೀಪ ರಾಮನಗರದ ಬಿಳಿ ನಿರ್ಮಿಸಲಾಗಿರುವ 'ಜಾನಪದ ಲೋಕ' ಜಾನಪದ ವಸ್ತುಸಂಗ್ರಹಾಲಯಕ್ಕೆ, ಜಾನಪದ ಚಟುವಟಿಕೆಗಳಿಗೆ ಮೀಸಲಾಗಿರುವ ಅಪೂರ್ವ ಕೇಂದ್ರವಾಗಿದೆ. ಬದುಕು ಬದಲಾದಂತೆ ಮರೆಯಾಗುತ್ತಿರುವ ಎಲ್ಲಾ ಜಾನಪದಕ್ಕೆ ಸಂಬಂಧಿಸಿದ ಜನಪದ ಕಲೆ, ಜನಪದ ಶಿಕ್ಷಣ, ಜನಪದ ವಸ್ತು, ಮುಂತಾದವುಗಳನ್ನು ಸಂಗ್ರಹಿಸಿ, ಸಂರಕ್ಷಿಸಿ, ಆಚರಿಸುತ್ತಿರುವುದು ಜಾನಪದ ಲೋಕದ ವೈಶಿಷ್ಟ್ಯವಾಗಿದೆ.[೨೫]

ಹುಟ್ಟಿದಂದಿನಿಂದ ಗ್ರಾಮೀಣ ಸಂಸ್ಕೃತಿಯ ನಡುವೆಯೇ ಬೆಳೆದ ನಾಡೋಜ ಎಚ್.ಎಲ್. ನಾಗೇಗೌಡರು (೧೯೧೫-೨೦೦೫) ಜಿಲ್ಲಾಧಿಕಾರಿಯಾಗಿ, ಶಿವಮೊಗ್ಗ, ಚಿಕ್ಕಮಗಳೂರು ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸೇವೆ ಸಲ್ಲಿಸುವಾಗ ಜನಪದ ಕಲೆ ಮತ್ತು ಸಾಹಿತ್ಯದ ಬಗ್ಗೆ ವಿಶೇಷ ಒಲವು ತಳೆದು ಅವುಗಳ ಸಂಗ್ರಹ ಹಾಗೂ ಸಂರಕ್ಷಣೆಯಲ್ಲಿ ಆಸಕ್ತಿ ಬೆಳೆಸಿಕೊಂಡರು. ಜಾನಪದವನ್ನು ಕುರಿತು ಅಪಾರ ಕಳಕಳಿ ಹಾಗೂ ಅದನ್ನು ಉಳಿಸಿ ಬೆಳೆಸುವ ಕನಸುಗಳನ್ನು ಹೊಂದಿದವರಾದ ಅವರು, ತಮ್ಮ ಸರ್ಕಾರಿ ಸೇವೆಯ ದಿನಗಳಲ್ಲಿ ಅಲ್ಲದೆ ನಿವೃತ್ತಿಯ ನಂತರವೂ ಆ ಕ್ಷೇತ್ರದಲ್ಲಿ ಅವಿರತ ದುಡಿಮೆಗೈದಿದ್ದಾರೆ.

ಕರ್ನಾಟಕ ಜಾನಪದ ಪರಿಷತ್ತು ೧೯೭೯ ಆರಂಭಗೊಂಡರೆ, ಅದರ ಚಟುವಟಿಕೆಗಳ ವಿಸ್ತೃತ ರೂಪವಾಗಿ ೧೯೯೪ರಲ್ಲಿ 'ಜಾನಪದ ಲೋಕ' ಪ್ರಾರಂಭವಾಯಿತು. ಜಾನಪದ ಲೋಕದಲ್ಲಿ ಡಾ. ಎಚ್.ಎಲ್. ನಾಗೇಗೌಡರು ಹಾಗೂ ಅವರ ಸಹವರ್ತಿಗಳು ಕೈಗೊಂಡ ವಸ್ತುಸಂಗ್ರಹಗಳು, ವಸ್ತುಗಳ ವಿವರ, ಜನಪದ ಕಲೆಗಳ ಬಗ್ಗೆ, ಹಬ್ಬ-ಹರಿದಿನಗಳ ಬಗ್ಗೆ, ಕೃಷಿ ಸಂಬಂಧಿತ ಚಟುವಟಿಕೆಗಳ

ಬಗ್ಗೆ, ಜನಪದ ಆಟ, ಕರಕುಶಲ ಕಲೆ ಇತ್ಯಾದಿಗಳ ಬಗ್ಗೆ, ದೃಶ್ಯ ಹಾಗೂ ಶ್ರವ್ಯ ದಾಖಲಾತಿಗಳು ಹಾಗೂ ಬಹು ಮಾಧ್ಯಮದ ಮಾಹಿತಿಯ ಸಂಗ್ರಹವೂ ಇದೆ.

ಪಟ್ಟಣಗಳಲ್ಲಿ ಓದಿ ನೌಕರಿಗೆ ಸೇರಿ ನಗರ ಜೀವನ ಮೈಗೂಡಿಸಿಕೊಂಡಿದ್ದರೂ, ನಾಗೇಗೌಡರು ಅಂತರ್ಯದಲ್ಲಿ ಒಬ್ಬ ಹಳ್ಳಿಗನಾಗಿ, ಕೃಷಿಕರು ಹಾಗೂ ಅವರ ಬದುಕಿನ ಬಗ್ಗೆ ಬಹಳ ಆಸಕ್ತಿ ಹೊಂದಿದ್ದರು. ಜನಪದ ಕಲೆಗಳು ಮರೆಯಾಗುತ್ತಿರುವ ಬಗ್ಗೆ ಅವರಿಗೆ ಬಹಳ ಬೇಸರವಿತ್ತು. ಜನಪದ ಕಲಾವಿದರು ಬದಲಾಗುತ್ತಿರುವ ಸಮಾಜಕ್ಕೆ ಹೊಂದುವಂತೆ ತಮ್ಮ ಕಲೆಯನ್ನೇ ಪರಿಷ್ಕರಿಸಿ ಮುಂದುವರೆಸಿಕೊಂಡು ಬಂದರೆ ಕಲೆಗಾರರು ಮತ್ತು ಕಲೆಯು ಬದುಕಬಹುದೆಂದು ನಂಬಿದ್ದ ಅವರು ಜನಪದ ಕಲೆಯನ್ನು ಸಮಾಜವೂ ಬೆಳೆಸಬೇಕು ಹಾಗೂ ಅದರಲ್ಲಿ ಕಲಾವಿದನ ವೈಯಕ್ತಿಕ ಶ್ರಮವೂ ಇರಬೇಕೆಂದು ನಂಬಿದ್ದರು. ಡಾ.ಎಚ್.ಎಲ್. ನಾಗೇಗೌಡರು ಜಾನಪದ ಲೋಕದಲ್ಲಿ ನಿರಂತರ ಚಟುವಟಿಕೆಗಳನ್ನು ನಡೆಸುವ ಮೂಲಕ ಪೀಳಿಗೆಗೆ ಕರ್ನಾಟಕದ ಶ್ರೀಮಂತ ಜಾನಪದ ಪರಂಪರೆಯ ಬಗ್ಗೆ ತಿಳಿಸಲು ಮುಂದಾದರು.[೨]

ಜಾನಪದ ಲೋಕವು ಎಚ್.ಎಲ್. ನಾಗೇಗೌಡರ ಕನಸಿನ ಕೂಸು. ಪಾರಂಪರಿಕ ವಸ್ತುಗಳನ್ನು ಸಂಗ್ರಹಿಸುವಲ್ಲಿ ಅವರಿಗಿದ್ದ ಒಲವು ೭೦ರ ದಶಕದಲ್ಲಿಯೇ ಶಿವಮೊಗ್ಗ ಜಿಲ್ಲಾ ಮ್ಯೂಸಿಯಂ ಆರಂಭಿಸಲು ಪ್ರೇರೇಪಿಸಿತ್ತು. ನಂತರ ಸಂಗ್ರಹಿಸಿದ ಅಪಾರ ಜನಪದೀಯ ವಸ್ತುಗಳನ್ನು ಆರಂಭದ ದಿನಗಳಲ್ಲಿ ಅವರ ಮನೆಯ ಒಂದು ಪಾರ್ಶ್ವದಲ್ಲೇ ಪ್ರದರ್ಶಿಸಲಾಗಿತ್ತು. ಜಾನಪದ ಲೋಕ ಸ್ಥಾಪನೆಗೊಂಡ ನಂತರ ಅವುಗಳನ್ನು ಇಲ್ಲಿಗೆ ಸ್ಥಳಾಂತರಿಸಿದಲ್ಲದೆ ಇನ್ನೂ ತೀವ್ರಗತಿಯಲ್ಲಿ ಸಂಗ್ರಹಣಾ ಕಾರ್ಯ ಮುಂದುವರೆಯಿತು. ಹಳೆಯದು ನಿರುಪಯುಕ್ತ ಎಂದು ಎಸೆಯಲ್ಪಟ್ಟ ಹಾಗೂ ಗ್ರಾಮೀಣ ಜೀವನವನ್ನು ಬಿಂಬಿಸುವ ವಸ್ತುಗಳನ್ನು ಈ ಸಂಗ್ರಹಾಲಯದಲ್ಲಿ ಸಂರಕ್ಷಿಸಿ ಇಡಲು ಇಚ್ಛಿಸಿದ್ದ ಅವರು ಪ್ರತಿಯೊಂದು ವಸ್ತುವನ್ನು ಅದರ ಚಂದದ ಮೇಲೆ ಅಳೆಯದೆ ಉಪಯುಕ್ತತೆ, ಅದನ್ನು ಉಪಯೋಗಿಸುವಾತ ಹಾಗೂ ಅದನ್ನು ತಯಾರಿಸಿದ ಕಾಲದ ಬಗ್ಗೆ ಹೆಚ್ಚು ಮಹತ್ವ ನೀಡಿದ್ದರು.

ಗೃಹ ಬಳಕೆಯ ವಸ್ತುಗಳನ್ನಲ್ಲದೆ ನಿರ್ದಿಷ್ಟ ಸಮುದಾಯಗಳು ತಲೆ-ತಲಾಂತರದಿಂದ ಮಾಡಿಕೊಂಡು ಬರುತ್ತಿರುವ ಕುಲಕಸುಬನ್ನು ಬಿಂಬಿಸುವ ಗ್ರಾಮೀಣ ಸಲಕರಣೆಗಳನ್ನು ಕಲೆ ಹಾಕಲು ಡಾ. ನಾಗೇಗೌಡರು ಹೆಚ್ಚಿನ ಒಲವನ್ನು ಹೊಂದಿದ್ದರು. ಬಹಳಷ್ಟು ಜನರು ಜಾನಪದ ಲೋಕದ ಸಂಗ್ರಹಾಲಯಕ್ಕೆ ತಮ್ಮಲ್ಲಿದ್ದ ಸಲಕರಣೆಗಳನ್ನು ಕೊಡುಗೆಯಾಗಿ ನೀಡಿದ ಕಾರಣದಿಂದಲೂ ಇಲ್ಲಿನ ಪ್ರದರ್ಶನಾಲಯಕ್ಕೆ ಹೆಚ್ಚಿನ ವಸ್ತುಗಳು ಸಂಗ್ರಹವಾದವು.

ಹೀಗೆ ಜಾನಪದ ಲೋಕವನ್ನು ಕಟ್ಟುವಲ್ಲಿ ಎಚ್.ಎಲ್. ನಾಗೇಗೌಡರು ಮಾಡಿದ ಪ್ರಯತ್ನ ಅವಿಸ್ಮರಣೀಯವಾದುದು.

## ಟಿಪ್ಪಣಿಗಳು

೧. ಪ್ರೊ. ಡಿ. ಲಿಂಗಯ್ಯ, ೨೦೦೬, ಜಾನಪದ ಸ್ವರೂಪ ಮತ್ತು ಸಾಹಿತ್ಯ, ಬಿ.ಎಂ.ಶ್ರೀ ಅಚ್ಚುಕೂಟ ಆಫ್‌ಸೆಟ್ ಪ್ರಿಂಟರ್ಸ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೨೧.

೨. ಡಾ. ಚಕ್ಕರೆ ಶಿವಶಂಕರ್, ೨೦೦೧, ನಾಗಸಂಪದ, ಚಂದನ ಪ್ರಿಂಟರ್ಸ್, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩೮.

೩. ಅದೇ....., ಪು. ೩೭.

೪. ಎಚ್.ಎಲ್. ನಾಗೇಗೌಡರ ಬಾಳು-ಬದುಕು, ಸಿದ್ಧಿ-ಸಾಧನೆಗಳು, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೧೨.

೫. ಅದೇ....., ಪು. ೧೩.

೬. ಅದೇ....., ಪು. ೧೧.

೭. ಡಾ. ಚಕ್ಕರೆ ಶಿವಶಂಕರ್, ೨೦೦೮, ನಾಡೋಜ ಎಚ್.ಎಲ್. ನಾಗೇಗೌಡ, ಕೃತಿಕ ಪ್ರಿಂಟರ್ಸ್, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೨೮.

೮. ಅದೇ....., ಪು. ೨೯.

೯. ಪ್ರಜಾವಾಣಿ-ಬೆಂಗಳೂರು ಗ್ರಾಮಾಂತರ, ಅಕ್ಟೋಬರ್ ೮, ೨೦೦೩, ಪು. ೫.

೧೦. ಎಚ್.ಎಲ್. ಸೋಮಶೇಖರ್, ಜುಲೈ-ಆಗಸ್ಟ್, ೧೯೮೯, ಜಾನಪದ ಜಗತ್ತು, ಸಂಪುಟ-೧೦, ಸಂಚಿಕೆ-೪, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೧೦.

೧೧. ಅದೇ....., ಪು. ೧೧.

೧೨. ಪ್ರೊ. ಡಿ. ಲಿಂಗಯ್ಯ, ಅಕ್ಟೋಬರ್-ಡಿಸೆಂಬರ್, ೧೯೯೯, ಜಾನಪದ ಜಗತ್ತು, ಸಂಪುಟ-೨೦, ಸಂಚಿಕೆ-೪, ವಿಶೇಷ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೫೯.

೧೩. ಡಾ. ಚಕ್ಕರೆ ಶಿವಶಂಕರ್, ಜುಲೈ-ಡಿಸೆಂಬರ್, ೨೦೦೪, ಜಾನಪದ ಜಗತ್ತು, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩೨.

೧೪. ಅದೇ....., ಪು. ೩೩.

೧೫. ಎಚ್.ಎಲ್. ನಾಗೇಗೌಡ, ಮೇ-ಜೂನ್, ೧೯೮೮, ಜಾನಪದ ಜಗತ್ತು, ಸಂಪುಟ-೯, ಸಂಚಿಕೆ-೩, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೧೯.

೧೬. ಅದೇ....., ಪು. ೨೦.

೧೭. ಅದೇ....., ಪು. ೨೧.

೧೮. ಅದೇ....., ಪು. ೨೨.

೧೯. ಪ್ರೊ. ಡಿ. ಲಿಂಗಯ್ಯ, ಜನವರಿ-ಡಿಸೆಂಬರ್ ೨೦೦೬, **ಜಾನಪದ ಜಗತ್ತು**, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೪೧.

೨೦. ಅದೇ....., ಪು. ೪೮.

೨೧. **ಲಂಕೇಶ್ ಪತ್ರಿಕೆ**, ಸೆಪ್ಟೆಂಬರ್ ೨೮, ೨೦೦೫, ಪು. ೩.

೨೨. ಡಾ. ಚಕ್ಕರೆ ಶಿವಶಂಕರ್, ಪ್ರೊ. ಡಿ. ಲಿಂಗಯ್ಯ, ಜನವರಿ-ಜೂನ್ ೨೦೦೭, **ಜಾನಪದ ಜಗತ್ತು**, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩೧.

೨೩. ಡಾ. ಚಕ್ಕರೆ ಶಿವಶಂಕರ್, ೨೦೦೧, **ನಾಗಸಂಪದ**, ಚಂದನ ಪ್ರಿಂಟರ್ಸ್, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩.

೨೪. ಡಾ. ಎಚ್.ಜೆ. ಲಕ್ಕಪ್ಪಗೌಡ, ೧೯೯೭, **ಜಾನಪದ ಕೈಪಿಡಿ**, ಲಕ್ಷ್ಮೀ ಮುದ್ರಣಾಲಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು. ೨೮೦.

೨೫. ಅದೇ....., ಪು. ೨೮೧.

೨೬. **ವಿಜಯ ಕರ್ನಾಟಕ**, ಫೆಬ್ರವರಿ ೧೧, ೨೦೦೮, ಪು. ೫.

• • •

## ಅಧ್ಯಾಯ ೩

# ಜಾನಪದ ಲೋಕ ಒಂದು ಸಂಗ್ರಹ

**ಈ** ಅಧ್ಯಾಯವು ಜಾನಪದ ಲೋಕ ಒಂದು ಸಂಗ್ರಹ ಎಂಬ ವಿಷಯಕ್ಕೆ ಸಂಬಂಧಿಸಿದ್ದು, ಈ ಅಧ್ಯಾಯದಲ್ಲಿ ಜಾನಪದ ವಸ್ತುಸಂಗ್ರಹಾಲಯದಲ್ಲಿ ಜನಪದಕ್ಕೆ ಸಂಬಂಧಿಸಿದ ವಸ್ತು-ವಿಷಯಗಳು ಹೇಗೆ ಸಂಗ್ರಹಗೊಂಡು ಜಾನಪದ ಪ್ರಪಂಚಕ್ಕೆ ಪ್ರಭಾವ ಬೀರುತ್ತಿವೆ ಎಂಬುದನ್ನು ತಿಳಿಸಲಾಗಿದೆ ಹಾಗೂ ಸಂಗ್ರಹಗೊಂಡಂತಹ ವಸ್ತುಗಳನ್ನು ಹೇಗೆ ವಿವಿಧ ವರ್ಗಗಳಾಗಿ ವರ್ಗೀಕರಿಸಲಾಗಿದೆ ಎಂಬುದನ್ನು ತಿಳಿಸುವುದರ ಜೊತೆಗೆ ಅವುಗಳು ಹೇಗೆ ಜಾನಪದ ಲೋಕದಲ್ಲಿ ಪ್ರದರ್ಶನವನ್ನು ನೀಡುತ್ತಿವೆ ಮತ್ತು ಅವುಗಳನ್ನು ಸಂರಕ್ಷಣೆ ಮಾಡಲು ಯಾವ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ಜಾನಪದ ವಸ್ತುಸಂಗ್ರಹಾಲಯಗಳು

ಒಂದು ಕಾಲದ, ಒಂದು ಪ್ರದೇಶದ ಮಾನವನ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಬದುಕನ್ನು ರೂಪಿಸಿದ, ಆದರೆ ಆಧುನಿಕತೆ ಹಾಗೂ ಕೈಗಾರೀಕರಣದ ಫಲವಾಗಿ ಬಳಕೆ ತಪ್ಪಿ ಹೋಗಿರುವ ಮತ್ತು ಬಳಕೆಯಲ್ಲಿದ್ದು ಪರಂಪರೆಯ ಮುದ್ರೆಯನ್ನು ಪಡೆದಿರುವ ವಸ್ತುಗಳ ಭಂಡಾರವೇ ಜಾನಪದ ವಸ್ತು ಸಂಗ್ರಹಾಲಯ.[1] ಇದು ಕೇವಲ ಸಾಧನ ಸಲಕರಣೆಗಳಿಗೆ ವಸ್ತ್ರ ಒಡವೆಗಳಿಗೆ ಸೀಮಿತವಲ್ಲ. ಬದುಕಿನ ಎಲ್ಲಾ ಕ್ಷೇತ್ರಗಳಿಗೂ ಅದರ ವ್ಯಾಪ್ತಿ ವಿಸ್ತರಿಸುತ್ತದೆ.

ಊರು, ನಗರಗಳ ನಿರ್ಮಾಣ, ಹುಲ್ಲುಸೋಗೆ, ಹಂಚು, ಕಾಂಕ್ರೀಟು ಸಂಸ್ಕೃತಿಗೆ ಮಾನವ ವಿಸ್ತರಿಸಿಕೊಂಡ ರೀತಿ ಎಲ್ಲವೂ ವಸ್ತುಸಂಗ್ರಹಾಲಯದ ರಕ್ಷೆಯೊಳಗೆ ಬರುತ್ತದೆ. ಬದುಕಿನ ಅನಿವಾರ್ಯ ಪ್ರಕ್ರಿಯೆಗಳಲ್ಲಿ ಒಂದಾದ ಆಧುನೀಕರಣದೊಂದಿಗೆ ನಾಶವಾಗುತ್ತಿರುವ ಸೌಂದರ್ಯಗಳನ್ನು ಮೂರ್ತೀಕರಿಸುವ ಹಿನ್ನೆಲೆಯಲ್ಲಿ ಜಾನಪದ ವಸ್ತುಸಂಗ್ರಹಾಲಯಗಳು ಮಹತ್ವವನ್ನು ಪಡೆದಿವೆ.

ಜಾನಪದ ಅಧ್ಯಯನದ ಮೊದಮೊದಲ ದಿನಗಳಲ್ಲಿ ಅದನ್ನು ಪಳೆಯುಳಿಕೆ ಶಾಸ್ತ್ರದ ಒಂದು ಭಾಗವಾಗಿ ಪರಿಗಣಿಸಲಾಗುತ್ತಿತ್ತು. ಸ್ಥಳೀಯವಾಗಿ ದೊರೆತ ಪ್ರಾಚೀನ ವಸ್ತು ಸಾಮಗ್ರಿಗಳನ್ನು ಶೇಖರಿಸುವ

ಉಗ್ರಾಣ ಎಂದು ವಸ್ತುಸಂಗ್ರಹಾಲಯಗಳನ್ನು ಕಲ್ಪಿಸಲಾಗಿತ್ತು. ಅದು ನಮ್ಮ ಪ್ರಾಚೀನ ಬದುಕಿನ ವಸ್ತು ವೈಭವವನ್ನು ಸಾರುವ ಸಾಮಗ್ರಿಗಳೇ ಹೊರತು ಅಧ್ಯಯನಕ್ಕೆ ಒಳಪಡಬೇಕಾದುದೆಂದು ಪರಿಗಣಿಸಲಿಲ್ಲ. ಜನಪದ ಭೌತಿಕ ಸಾಮಗ್ರಿಗಳ ಮೂಲಕ ಸಂಸ್ಕೃತಿಯ ಗತಿಯನ್ನು ನಿರ್ಧರಿಸಬಹುದೆನ್ನುವ ನಿಲುವು ಅಪರಿಚಿತವೇ ಆಗಿತ್ತು.[೨]

ಒಂದು ಸಮುದಾಯ ತನ್ನ ಬದುಕಿಗಾಗಿ ರೂಪಿಸಿಕೊಂಡ ಭೌತಿಕ ಸಾಮಗ್ರಿಗಳು, ವಸತಿ ನೆಲೆಗಳು, ಕೃಷಿ ಕೇಂದ್ರಗಳು ಕೈ ಕಸುಬಿನ ಸರಕುಗಳಷ್ಟೆ ಜಾನಪದ ವಸ್ತುಸಂಗ್ರಹಾಲಯಗಳಲ್ಲ. ಬದಲಾಗಿ ಆ ವಸ್ತು ಪರಿಕರಗಳ ಹುಟ್ಟಿಗೆ ಕಾರಣವಾದ ಇಡಿಯ ಜನಪದ ಜೀವನ ಹಾಗೂ ಸಂಪ್ರದಾಯಗಳು ಜಾನಪದ ವಸ್ತುಸಂಗ್ರಹಾಲಯದಲ್ಲಿ ಮುಖ್ಯವಾಗುತ್ತವೆ. ಜಾನಪದ ವಸ್ತುಸಂಗ್ರಹಾಲಯದಲ್ಲಿ ಮುಖ್ಯವಾಗಿ ಎರಡು ಗುರಿಗಳಿವೆ.

೧. ಅವು ಸಮುದಾಯದ ಬದುಕಿನ ಒಂದು ಸ್ಪಷ್ಟ ಚಿತ್ರ ನೀಡುವಂತಿರಬೇಕು. ಒಂದು ಪ್ರದೇಶದ ಸಾಂಸ್ಕೃತಿಕ ಅನನ್ಯತೆಯನ್ನು ಅದು ಪ್ರತಿನಿಧಿಸುವಂತಿರಬೇಕು.

೨. ಅನನ್ಯತೆಯನ್ನು ಸಮುದಾಯದ ಐತಿಹಾಸಿಕ ಪ್ರಗತಿಯನ್ನು ಪರಿಕಲ್ಪಿಸಿಕೊಳ್ಳಲು ಅಲ್ಲಿನ ವಸ್ತುಗಳು ಸಹಕಾರಿಯಾಗಬೇಕು.

ಸಾವಿರಾರು ವರ್ಷಗಳಿಂದ ರೂಪುಗೊಂಡು ಒಂದು ಅನುಭವ ಜ್ಞಾನದ ಪ್ರತೀಕವಾಗಿರುವ ಸಾಂಸ್ಕೃತಿಕ ಪರಂಪರೆಗಳು ಆಧುನಿಕತೆಯ ದಾಳಿಯಿಂದ ಅವಸಾನದ ಅಂಚಿನಲ್ಲಿವೆ. ಹೀಗೆ ಅಳಿದು ಹೋಗುತ್ತಿರುವ ಪರಂಪರಾಗತ ವಸ್ತುವಿಶೇಷಗಳನ್ನು ನಮ್ಮ ಮುಂದಿನ ತಲೆಮಾರುಗಳ ಅರಿವಿಗಾಗಿ ಕಾಯ್ದಿಡಬೇಕು ಎಂಬ ಉದ್ದೇಶದಿಂದ ಹಾಗೂ ಆಧುನಿಕತೆಯ ಪರಿಣಾಮವಾಗಿ ಸಾಂಸ್ಕೃತಿಕ ಪರಂಪರೆಗಳು ಬಹಳ ಬೇಗ ಕಣ್ಮರೆಯಾಗುವಂತಹ ಸ್ಥಿತಿಯನ್ನು ತಪ್ಪಿಸಿ ಈ ಪರಂಪರೆಯನ್ನು ನಮ್ಮ ಮುಂದಿನ ತಲೆಮಾರುಗಳಿಗೆ ಕಾಯ್ದಿಡಬೇಕು ಮತ್ತು ಸಾಂಸ್ಕೃತಿಕ ಪರಂಪರೆಯ ಬಗ್ಗೆ ನಮ್ಮ ಅಸಡ್ಡೆ, ಅಜ್ಞಾನ, ಅಂಧಶ್ರದ್ಧೆಗಳ ಫಲವಾಗಿ ಅಮೂಲ್ಯವಾದ ವಸ್ತು ವಿಶೇಷಗಳು ನಮ್ಮ ಕೈಗೆ ಸಿಗದಂತಾಗುತ್ತಿವೆ. ಅವುಗಳನ್ನು ಸಂರಕ್ಷಿಸಲು ವಸ್ತುಸಂಗ್ರಹಾಲಯ ಪಾತ್ರ ಅತ್ಯಾವಶ್ಯಕವಾದುದು.[೩]

ಆದಿಮಾನವ ಸ್ಥಿತಿಯ ಕಾಲದಿಂದಲೂ ಮನುಷ್ಯ ತನ್ನ ಅಗತ್ಯಕ್ಕೆ ಬೇಕಾದ ವಸ್ತುಗಳನ್ನು ಸೃಷ್ಟಿಸಿಕೊಳ್ಳುತ್ತಾ ಬಂದಿದ್ದಾನೆ. ಅಡುಗೆಯ ಪಾತ್ರೆ ಪರಿಕರಗಳು, ಬೇಟೆ ಮೀನುಗಾರಿಕೆಯ ಸಾಧನ ಸಲಕರಣೆಗಳು, ಕೃಷಿ ಉಪಕರಣಗಳು, ಉಡುಗೆ-ತೊಡುಗೆ ಒಡವೆಗಳು, ಆಯುಧಗಳು, ಮಕ್ಕಳ ಆಟಿಕೆಯ ವಸ್ತುಗಳು, ನೇಯ್ಗೆ, ಕುಂಬಾರಿಕೆ, ಕಮ್ಮಾರಿಕೆ ಮೊದಲಾದ ವೃತ್ತಿ ಸಾಧನ ಸಲಕರಣೆಗಳು ಪೂಜಾವಸ್ತುಗಳು ಇತ್ಯಾದಿಯಾಗಿ ಮನುಷ್ಯ ಸೃಷ್ಟಿಸಿದ ವಸ್ತುಗಳು ಪರಂಪರೆಯ ಮುದ್ರೆ ಪಡೆದಿರುತ್ತವೆ. ಕಾಲಕ್ಕೆ ತಕ್ಕಂತೆ ಇವುಗಳ ತಯಾರಿಕೆಗೆ ಒಳಸುವ ಸಾಮಗ್ರಿ ಹಾಗೂ ರೂಪ ವಿನ್ಯಾಸಗಳಲ್ಲಿ ಮಾರ್ಪಾಟುಗಳಾಗಬಹುದು. ಎಷ್ಟೋ

ವಸ್ತುಗಳು ಉಪಯೋಗವಿಲ್ಲದವೂ ಆಗಬಹುದು. ಇಂಥ ಎಲ್ಲಾ ವಸ್ತುಗಳನ್ನು ಸಂಗ್ರಹಿಸಿ, ಅವುಗಳನ್ನು ದಾಖಲಿಸಿ, ಶಾಸ್ತ್ರೀಯವಾಗಿ ಇಡುವುದೇ ಜಾನಪದ ವಸ್ತುಸಂಗ್ರಹಾಲಯದ ಉದ್ದೇಶ.

"ಒಂದು ಪ್ರದೇಶದ ಒಂದು ಕಾಲದ ಮಾನವನ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಕಲಾತ್ಮಕ ಬದುಕನ್ನು ಪ್ರತಿಬಿಂಬಿಸುವಂತಹ ಅವನ ಸಮಸ್ತ ವಸ್ತುಗಳನ್ನು ಒಂದೆಡೆ ಸೇರಿಸಿದರೆ ಅದು ಜಾನಪದ ವಸ್ತುಸಂಗ್ರಹಾಲಯವೆನಿಸುತ್ತದೆ. ಇದು ಮಾನವ ಸಂಸ್ಕೃತಿಯ ನೆಲೆಗಟ್ಟನ್ನು ಹೇಳುವಂತಹ ವಸ್ತುಸಂಗ್ರಹಾಲಯ. ಜಾನಪದ ಜೀವನಕ್ಕೆ ಸಂಬಂಧಿಸಿದ ಸಮಸ್ತ ವಸ್ತುಗಳೂ ಇಲ್ಲಿ ಸಂಗ್ರಹ ಗೊಳ್ಳುತ್ತವೆ."[೪]

## ವಸ್ತುಸಂಗ್ರಹಾಲಯದ ಅವಶ್ಯಕತೆ ಮತ್ತು ಉದ್ದೇಶ

ಒಂದು ನಿರ್ದಿಷ್ಟ ಪ್ರದೇಶ, ಜನವರ್ಗಗಳ ಸಂಸ್ಕೃತಿಯನ್ನು ತಿಳಿಯುವುದಕ್ಕೆ ಇಂಥ ವಸ್ತುಸಂಗ್ರಹಾಲಯಗಳು ನೆರವಾಗುತ್ತವೆ. ಇಲ್ಲಿ ಸಂಗ್ರಹಗೊಳ್ಳುವ ಅನೇಕ ವಸ್ತುಗಳು ಮಾನವನ ಬದುಕಿನ ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಸೃಷ್ಟಿಯಾದಂತವು ಮತ್ತು ಬಳಕೆಯಾದಂತವು. ಆ ಕಾಲದ ಸಂಸ್ಕೃತಿಯನ್ನು ಅರಿತುಕೊಳ್ಳುವುದಕ್ಕೆ ವಸ್ತುಸಂಗ್ರಹಾಲಯಗಳಂಥ ಸಂಸ್ಥೆಗಳು ಮಾತ್ರವೇ ಸಹಾಯ ಮಾಡಬಲ್ಲವು. ಭಾರತದ ಸಂದರ್ಭವನ್ನೇ ನೋಡಿ ಹೇಳುವುದಾದರೆ ವಿದ್ಯುತ್ ಯಂತ್ರ ಚಾಲಿತ ಗಿರಣಿಗಳು ಬಂದ ನಂತರ ಬೀಸುವ ಕಲ್ಲು, ಒನಕೆ, ಗಾಣ, ಒರಳುಗಳು ತಮ್ಮ ಉಪಯೋಗ ಕಳೆದುಕೊಂಡಿವೆ. ನೀಲಗಾರರು, ದೊಂಬಿದಾಸರು, ಚೌಡಿಕೆಯವರು, ಕಿನ್ನರಿ ಜೋಗಿಗಳು, ಕರಪಾಲದವರು ಮೊದಲಾದ ವೃತ್ತಿಗಾಯಕರ ಪರಂಪರೆಗಳಿಗೆ ಈಗ ಮಾನ್ಯತೆ ಇಲ್ಲವಾದ್ದರಿಂದ ಅವರ ವಾದ್ಯಗಳು, ವೇಷಭೂಷಣಗಳು, ಕಣ್ಮರೆಯಾಗುತ್ತಿವೆ. ಇಂಥವರ ಪರಂಪರೆಗಳ ಬಗ್ಗೆ ಅಧ್ಯಯನ ಮಾಡಲು ವಸ್ತುಸಂಗ್ರಹಾಲಯಗಳು ಮಾತ್ರವೇ ಅಧಿಕೃತ ಮಾಹಿತಿ ಒದಗಿಸಬಲ್ಲವು. ವಸ್ತುಸಂಗ್ರಹಾಲಯದಲ್ಲಿ ಸಂಗ್ರಹಗೊಂಡಿರುವ ಅತ್ಯಂತ 'ಕನಿಷ್ಠ' ವಸ್ತುವೂ ಕೂಡ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ. "ಪರಂಪರಾಗತ ಸಂಸ್ಕೃತಿಯ ವಿವಿಧ ವಸ್ತುಗಳನ್ನು ಗುರುತಿಸಲು, ನಮ್ಮ ಪೂರ್ವಜರ ಜೀವನ ಕಲೆ, ಕುಶಲ ಕಲೆ ಮುಂತಾದವುಗಳನ್ನು ತಿಳಿಯಲು ವಸ್ತುಸಂಗ್ರಹಾಲಯಗಳು ಅಗತ್ಯವಾಗಿವೆ."[೫]

## ಜಾನಪದ ವಸ್ತುಸಂಗ್ರಹಾಲಯಗಳ ಸ್ವರೂಪ

ಜಾನಪದ ವಸ್ತುಸಂಗ್ರಹಾಲಯಗಳಲ್ಲಿ ಒಳಾಂಗಣ ಮತ್ತು ಹೊರಾಂಗಣ ವಸ್ತುಸಂಗ್ರಹಾಲಯ ಗಳೆಂದು ಎರಡು ರೀತಿ ಇವೆ. ಒಳಾಂಗಣ ವಸ್ತುಸಂಗ್ರಹಾಲಯದಲ್ಲಿ ದಿನನಿತ್ಯದ ಬಳಕೆಯ ಅಡುಗೆ ಸಾಧನ, ಪೂಜಾಸಲಕರಣೆಗಳು, ಅಳತೆ ಸಾಧನಗಳು, ವಾದ್ಯ ವಿಶೇಷಗಳು, ವೇಷಭೂಷಣಗಳು, ಕ್ರೀಡಾ ಸಾಧನಗಳು, ಕಸೂತಿ, ಕೆತ್ತನೆ ಮೊದಲಾದ ಕಲಾಕುಶಲದ ವಸ್ತುಗಳು ಇತ್ಯಾದಿಗಳನ್ನು ಕ್ರಮಬದ್ಧವಾಗಿ ಜೋಡಿಸಲಾಗಿರುತ್ತದೆ.

ಹೊರಾಂಗಣ ಸಂಗ್ರಹಾಲಯದಲ್ಲಿ ಹೆಬ್ಬಾಗಿಲು, ಮನೆಯ ಮಾದರಿ ಕಟ್ಟಡಗಳು, ದೇವಾಲಯ, ಕೆರೆ, ಅರಳೀಕಟ್ಟೆ, ರಸ್ತೆಗಳ ಮಾದರಿ ವಿನ್ಯಾಸ, ತೋಟ, ರಂಗಮಂದಿರ ಮುಂತಾದವುಗಳನ್ನು ಕಾಣಬಹುದು.

ಜಾನಪದ ವಸ್ತುಸಂಗ್ರಹಾಲಯಗಳಲ್ಲಿ ದೊಡ್ಡದು ಬೆಲೆಯುಳ್ಳದ್ದು ಇಲ್ಲದ್ದು ಕಲಾತ್ಮಕವಾದುದು, ಸಾಧಾರಣವಾದುದು ಎಂಬ ಭೇದವಿಲ್ಲದೆ ಸಂಸ್ಕೃತಿಯ ದೃಷ್ಟಿಯಿಂದ ಅರ್ಥಪೂರ್ಣವಾಗುವ ಎಲ್ಲಾ ವಸ್ತುಗಳನ್ನು ಸಂಗ್ರಹಿಸಬೇಕಾಗುತ್ತದೆ. ವಸ್ತುಸಂಗ್ರಹಾಲಯಗಳು ಬರೀ ವಸ್ತುಗಳನ್ನು ಸಂಗ್ರಹಿಸದೆ, ಅವುಗಳ ಬಳಕೆ, ಪ್ರಯೋಜನ, ತಯಾರಿಕಾ ವಿಧಾನ, ತಯಾರಿಕೆಗೆ ಬಳಸುವ ಸಾಮಗ್ರಿ ಮುಂತಾದ ಅನೇಕ ವಿಷಯಗಳನ್ನೂ ಒಟ್ಟೊಟ್ಟಿಗೆ ದಾಖಲಿಸುವ ಕೆಲಸ ಮಾಡಬೇಕಾಗುತ್ತದೆ. ಈ ಯಾವುದೇ ವಿವರಗಳಿಲ್ಲದೆ ವಸ್ತುಗಳನ್ನು ಸಂಗ್ರಹಿಸಿಟ್ಟರೆ ಅಧ್ಯಯನಕ್ಕೆ ಅವು ಪ್ರಯೋಜನವಾಗುವುದಿಲ್ಲ.

ಉದಾ:- ಯಕ್ಷಗಾನದ ವೇಷಭೂಷಣಗಳನ್ನು ಸಂಗ್ರಹಿಸಿದರಷ್ಟೇ ಸಾಲದು; ಯಾವ ಯಾವುದನ್ನು ಹೇಗೆ ಎಲ್ಲಿಗೆ ಧರಿಸಬೇಕೆಂಬುದರ ವಿವರವನ್ನು ಚಿತ್ರದ ಮೂಲಕವಾಗಿಯೋ ಮೂರ್ತಿಶಿಲ್ಪದ ಮೂಲಕ ವಾಗಿಯೋ ತೋರಿಸುವುದು ಅಗತ್ಯ.

ಸಂಗ್ರಹಿಸಿದ ವಸ್ತುಗಳನ್ನು ಕ್ರಿಮಿಕೀಟ, ಧೂಳು, ಶಾಖ, ತೇವ ಮೊದಲಾದ ಉಪದ್ರವಗಳಿಂದ ಸಂರಕ್ಷಿಸಿಡುವುದು ಕೂಡ ಬಹುಮುಖ್ಯವಾದ ಜವಾಬ್ದಾರಿ. ಆಯಾ ವಸ್ತುವಿನ ಸ್ವರೂಪಕ್ಕನುಗುಣವಾಗಿ ಸಂರಕ್ಷಣೆಯ ವಿಧಾನಗಳನ್ನು ಸಹ ರೂಪಿಸಿಕೊಳ್ಳಬೇಕಾಗುತ್ತದೆ. ವಸ್ತುಸಂಗ್ರಹಾಲಯಗಳು ತೀರ ದೊಡ್ಡವೂ ಆಗ ಕೂಡದು, ತೀರ ಚಿಕ್ಕವೂ ಆಗ ಕೂಡದು. ಸಂಗ್ರಹಿಸಿದ ವಸ್ತುಗಳ ಭಾರದಿಂದ ಅವು ತತ್ತರಿಸುವಂತಿರ ಬಾರದು, ಅವುಗಳನ್ನು ನೋಡುವುದು ಒಂದು ಆಹ್ಲಾದಕರ ಅನ್ನಿಸುವಂತಿರಬೇಕು.[೬]

### ೩.೧. ವರ್ಗೀಕರಣ ಮತ್ತು ಪ್ರದರ್ಶನ

ಪ್ರಸ್ತುತ ಅಧ್ಯಯನದ ಜಾನಪದ ಲೋಕ ವಸ್ತುಸಂಗ್ರಹಾಲಯದಲ್ಲಿ ವರ್ಗೀಕರಣ ಮತ್ತು ಪ್ರದರ್ಶನ ವಿಧಾನ ಪ್ರಮುಖವಾದುದು. ಇದರಿಂದ ವಿವಿಧ ವರ್ಗಗಳಾಗಿ ವಿಂಗಡಿಸಿ ಆ ಮುಖಾಂತರ ವಸ್ತು ವೈವಿಧ್ಯತೆಯನ್ನು ಕಾಣಬಹುದು. ಅವುಗಳನ್ನು ಈ ಕೆಳಗಿನಂತೆ ವರ್ಗೀಕರಿಸಲಾಗಿದೆ.

೧. ಲೋಕ ಮಹಲ್

೨. ಲೋಕಮಾತಾ ಮಂದಿರ

೩. ಚಿತ್ರ ಕುಟೀರ

೪. ಶಿಲ್ಪಮಾಳ

೫. ಆಯಾಗಾರರ ಮಾಳ

ಹೀಗೆ ವಿವಿಧ ಭಾಗಗಳಾಗಿ ವರ್ಗೀಕರಿಸಿ ಒಂದೊಂದು ವಿಭಾಗಗಳಲ್ಲಿ ಒಂದೊಂದು ರೀತಿಯ ಜಾನಪದಕ್ಕೆ ಸಂಬಂಧಿಸಿದ ಜಾನಪದ ವಸ್ತುಗಳನ್ನು ನೋಡಬಹುದಾಗಿದೆ.

ಉದಾ:- ಲೋಕ ಮಹಲ್‌ನಲ್ಲಿ ವಾದ್ಯಗಳು, ಗೊಂಬೆಗಳು, ಒಡವೆ ಸಲಕರಣೆ, ಅಡುಗೆ ಸಲಕರಣೆ ಗಳು, ಆಯುಧಗಳು, ಪೂಜಾವಸ್ತುಗಳನ್ನು, ಲೋಕಮಾತಾಮಂದಿರದಲ್ಲಿ ಗಿರಿಜನರು ಬಳಸುತ್ತಿದ್ದ ವಾಡೆ, ಗುಡಾಣ, ಮಗ್ಗೆ, ಎತ್ತು, ಬೀಸುವ ಕಲ್ಲನ್ನು, ಚಿತ್ರ ಕುಟೀರದಲ್ಲಿ ನಾಗೇಗೌಡರ ಜಾನಪದ ಬೆಳವಣಿಗೆ ಯನ್ನು ತೋರಿಸುವ ಚಿತ್ರಗಳನ್ನು, ಶಿಲ್ಪಮಾಳದಲ್ಲಿ ವೀರಗಲ್ಲು, ಶಾಸನ, ಸತೀಕಲ್ಲುಗಳನ್ನು ಹಾಗೂ ಆಯಗಾರರ ಮಾಳದಲ್ಲಿ ಕಣ್ಮರೆ ಆಗುತ್ತಿರುವ ಹಳ್ಳಿಯ ಕಸುಬುಗಳಾದ ಕುಂಬಾರಿಕೆ, ಕಮ್ಮಾರಿಕೆ, ಬೇಸಾಯದ ಸಲಕರಣೆಗಳನ್ನು ನೋಡಬಹುದು. ಹೀಗೆ ಇವುಗಳನ್ನು ವಿಸ್ತಾರವಾಗಿ ಈ ಕೆಳಗಿನಂತೆ ನೋಡಬಹುದು.

**ಲೋಕ ಮಹಲ್**

ಪ್ರಸ್ತುತ ಅಧ್ಯಯನದ ಜಾನಪದ ವಸ್ತುಸಂಗ್ರಹಾಲಯಗಳಲ್ಲಿ ಲೋಕ ಮಹಲ್ ಪ್ರಮುಖ ಪಾತ್ರವಹಿಸುತ್ತದೆ. ಜಾನಪದಕ್ಕೆ ಸಂಬಂಧಿಸಿದ ಸುಮಾರು ೫೦೦೦ಕ್ಕೂ ಹೆಚ್ಚು ವಸ್ತುಗಳನ್ನು ಕಲಾತ್ಮಕವಾಗಿ ಹಾಗೂ ವೈಜ್ಞಾನಿಕವಾಗಿ ಕಾಯ್ದಿರಿಸುವ ವ್ಯವಸ್ಥೆಯನ್ನು ಮಾಡಲಾಗಿದೆ. ಈ ಲೋಕ ಮಹಲ್ ಕಟ್ಟಡವೂ ಎರಡು ಅಂತಸ್ತುಗಳ ಕಟ್ಟಡವಾಗಿದೆ. ಜಾನಪದ ಲೋಕದಲ್ಲಿ ಸಂಗ್ರಹಿಸಿರುವ ಬಹುಪಾಲು ವಸ್ತುಸಂಗ್ರಹಾಲಯಗಳಲ್ಲಿ ಹೆಚ್ಚಿನ ಪಾಲು ಲೋಕ ಮಹಲ್ ವಸ್ತುಸಂಗ್ರಹಾಲಯಕ್ಕೆ ಸಲ್ಲುತ್ತದೆ.[೭]

ಇಲ್ಲಿ ಸಂಗ್ರಹಿಸಿರುವ ವಸ್ತುಗಳು ಜಾನಪದಕ್ಕೆ ಸಂಬಂಧಿಸಿದಂತೆ ಎಲ್ಲಾ ಬಗೆಯಲ್ಲೂ ಇರುವುದನ್ನು ನೋಡಬಹುದು. ಇಲ್ಲಿ ಸಂಗ್ರಹಿಸಿರುವ ಜನಪದ ವಸ್ತುಗಳು ಪ್ರವಾಸಿಗರ ಕಣ್ಮನ ಸೆಳೆಯುತ್ತವೆ. ಇವುಗಳನ್ನು ಎಷ್ಟು ಬಾರಿ ನೋಡಿದರೂ ಸಾಲದು, ಮತ್ತೊಮ್ಮೆ ನೋಡಬೇಕು ಎನಿಸುತ್ತದೆ. ಅವುಗಳನ್ನು ಈ ಕೆಳಗಿನಂತೆ ವಿವಿಧ ವರ್ಗಗಳಾಗಿ ವರ್ಗೀಕರಿಸಿ ಪ್ರದರ್ಶಿಸಲಾಗಿದೆ.

ಅವುಗಳೆಂದರೆ,

- **ತೊಗಲು ಗೊಂಬೆಗಳು**

ಮಂಡ್ಯ, ಬಿಜಾಪುರ, ಬಳ್ಳಾರಿ ಜಿಲ್ಲೆಗಳ ೨೪೦ಕ್ಕೂ ಹೆಚ್ಚು ವೈವಿಧ್ಯಮಯ ತೊಗಲು ಗೊಂಬೆಗಳು.

- **ಸೂತ್ರದ ಗೊಂಬೆಗಳು**

ಧಾರವಾಡ, ದಕ್ಷಿಣ ಕನ್ನಡ, ಬೆಂಗಳೂರು ಹಾಗೂ ಮಂಡ್ಯ ಭಾಗದ ಸೂತ್ರದ ಗೊಂಬೆಗಳು.

- **ವೇಷಭೂಷಣಗಳ ಆಳೆತ್ತರದ ಗೊಂಬೆಗಳು**

ಕರಾವಳಿಯ ತೆಂಕುತಿಟ್ಟು, ಬಡಗುತಿಟ್ಟು, ಯಕ್ಷಗಾನ, ಮೈಸೂರು ಯಕ್ಷಗಾನ, ದೊಡ್ಡಾಟ ಯಕ್ಷಗಾನ, ಗೊರವ, ಕಿನ್ನರಿಜೋಗಿ, ಲಂಬಾಣಿ ಹೆಂಗಸು ಇವುಗಳು ಆಯಾಯ ವೇಷಭೂಷಣ ತೊಡಿಸಿರುವ ಆಳೆತ್ತರದ ಗೊಂಬೆಗಳು.

• ಚರ್ಮ ವಾದ್ಯಗಳು

ತಮಟೆ, ತಾರ್ಸೆ, ಗುಮಟೆ, ಗುಮಟೆ ಪಾಂಗ್, ಚಂಡೆ, ಮದ್ದಲೆ, ಮೃದಂಗ, ಸಮಾಳ, ಡೊಳ್ಳು, ಡುಂಕಿ, ಡಮರುಗ, ಚಿಕ್ಕಡಮರುಗ, ಡಪ್ಪು, ಕಣಿಹಲಗೆ, ಮುಕುಟ ವಾದ್ಯಗಳು, ಬುಡಬುಡಿಕೆ ಇತ್ಯಾದಿಗಳು.

• ತಂತಿ ವಾದ್ಯಗಳು

ಕಿನ್ನರಿ, ತಂಬೂರಿ, ಏಕತಾರಿ, ಚೌಡಿಕೆ, ಬಾರಿಕೆ ಮತ್ತು ತುಂತುಣಿ ಇತ್ಯಾದಿ.

• ಲೋಹ ಅಥವಾ ತಾಳ ವಾದ್ಯಗಳು

ದೊಡ್ಡಾಟ, ಸಣ್ಣಾಟ, ಶ್ರೀಕೃಷ್ಣಪಾರಿಜಾತ, ಭಾಗವಂತಿಕೆ ಮೇಳ, ಭಜನಾಮೇಳ, ಮುಂತಾದವುಗಳಲ್ಲಿ ಬಳಸುವ ತಾಳಗಳು, ಗಗ್ಗರ, ಗೆಜ್ಜೆ, ಕಂಸಾಳೆ, ಹೆಳವರಗಂಟೆ, ಇತ್ಯಾದಿ ಲೋಹಗಳಿಂದ ಮಾಡಿದ ವಾದ್ಯಗಳು ಹಾಗೂ ಚಕ್ಕೆಕೋಲು, ಕೋಲಾಟದ ಕೋಲು, ಚಿಟಗಿ ಇತ್ಯಾದಿಗಳು.

• ಊದುವ ವಾದ್ಯಗಳು

ಶೃತಿ, ಮೌರಿ, ಸುಂದರಿ, ಪುಂಗಿ, ಪಿಳ್ಳಂಗೋವಿ, ತಿತ್ತಿ, ಸಡ್ಡೆ, ಕೊಳಲು ಇತ್ಯಾದಿ.

• ಒಡವೆ ವಸ್ತುಗಳು

ಸೇವಂತಿಕೆ, ಮುಳ್ ಸೇವಂತಿಗೆ, ಚೂಡಾರತ್ನ, ಲಕ್ಷ್ಮಿನಾಗರ, ತಲೆಬಿಲ್ಲೆ, ಚೈತಲೆಬಿಲ್ಲೆ, ಕುಪ್ಪಗೆ, ಜೀರಾಪಟ್ಟಿ, ಡಾಬು, ದೊಂಬರ ಚೆನ್ನಿಯ ವಡ್ಯಾಣ ಮತ್ತು ವಂಕಿ ಬಳೆ, ಗೀರುಬಳೆ, ದಂತಬಳೆ, ತೋಳುಬಳೆ, ಕಡಗ, ಗೊಲ್ಲಕಡಗ, ಗೆಜ್ಜೆ, ಕಾಲುಂಗರ, ಕರಿಮಣಿಸರ, ಕೇಸರಿಮಣಿಸರ, ಕೆಂಪುಮಣಿಸರ, ರುದ್ರಾಕ್ಷಿ ಮಣಿಸರ, ಹಾಲಕ್ಕಿ ಹೆಂಗಸರ ಕರಿಮಣಿ ಸರಗಳು ಇತ್ಯಾದಿಗಳು.

• ಆಯುಧಗಳು

ಖಡ್ಗ, ಕತ್ತಿ, ದುಂಡುಭರ್ಜಿ, ತ್ರಿಶೂಲ, ಗಂಡುಕೊಡಲಿ, ಕುಡುಗೋಲು, ಮೆಟ್ಟುಗತ್ತಿ, ಕೊಯಿಲು ಕತ್ತಿ, ಕುರಿತುಪ್ಪಟ ಕತ್ತರಿಸುವ ಕತ್ತರಿ, ಇಲಿಕತ್ತರಿ, ಕಣಿಹಂದಿ ಕತ್ತರಿ ಇತ್ಯಾದಿ.

• ಮಕ್ಕಳ ಆಟಿಕೆಗಳು

ಚಂದನದ ಗೊಂಬೆಗಳು, ವಿಷ್ಣುಗೊಂಬೆ, ಸಕ್ಕರೆಗೊಂಬೆ, ನಾಲ್ಕುಗಾಲಿ ಬಸವ, ಮರದ ದೋಣಿ, ಚನ್ನೆಮಣೆ ಅಥವಾ ಅಳ್‌ಗುಳಿ ಮಣೆ, ತಾಂಬ್ಲದ ಮಣೆ ಇತ್ಯಾದಿ.

• ಮದುವೆಗೆ ಸಂಬಂಧಿಸಿದ ವಸ್ತುಗಳು

ಮದುವೆ ಶಾಸ್ತ್ರದ ಕುಕ್ಕೆ, ಪಟ್ಟಿ, ಬಾಸಿಂಗ, ಬುಜಣಿಗೆ, ತೇವಟಿಗೆ ಮಣೆ, ಪೂಜಾಮಣೆ, ಮೆಟ್ಟಕ್ಕಿಸಿಬ್ಲು, ನಾಗರಮಣೆ, ಬಳುವಳಿ ಪಾತ್ರೆ ಇತ್ಯಾದಿ.

• ಬಟ್ಟೆ ಬರೆ

ಹತ್ತಿಕುಂಚಗಿ, ರೇಷ್ಮೆ ಕುಂಚಗಿ, ಮುತ್ತಿನ ಕುಂಚಗಿ, ಮಕ್ಮಲ್ ಕುಲಾಯಿ, ಕೌದಿ, ದುಪಟಿ ಹಾಗೂ ರಾಮ-ರಾವಣರ ಯುದ್ಧ, ವಿಷ್ಣುವಿನ ದಶಾವತಾರದ ಚಿತ್ರಗಳಿರುವ ಬಟ್ಟೆಯ ಬಾಗಿಲು ತೋರಣ ಇತ್ಯಾದಿ.

• ದೀಪ-ಆರತಿಗಳು

ಹಣತೆ, ಬಳಪದ ಹಣತೆ, ದೊಂದಿ ಹಣತೆ, ಕಂದಲಾರತಿ, ಕೂರ್ಮಾರತಿ, ದೂಪಾರ್ತಿ, ಪಂಚಾರತಿ, ಹವಳದಾರತಿ, ನೀಲಾಂಜನ ಇತ್ಯಾದಿ.

• ದೇವರ ವಿಗ್ರಹಗಳು ಹಾಗೂ ಪೂಜಾ ಸಾಮಗ್ರಿಗಳು

ದೇವಿ ವಿಗ್ರಹ, ಹಂದಿ ವಿಗ್ರಹ, ಬಳಪದ ಬಸವನ ಮೂರ್ತಿ, ಪಲ್ಲಕ್ಕಿ, ಮರದಶಂಖ, ತ್ರಿಶೂಲ, ನಾಮದ ಬುರುಡೆ, ಉದ್ದರಣೆ, ದೇವರ ಮಣೆ, ಕುಂಕುಮದ ಭರಣಿ, ಹೂಬುಟ್ಟಿ, ಹುಲ್ಲಿನ ಮಣಿಬುಟ್ಟಿ, ಬೆತ್ತದ ಬುಟ್ಟಿ, ಗಂಧಾಕ್ಷತೆ, ತಾಂಡವಾಳದ ಕಿರೀಟ ಇತ್ಯಾದಿ.

• ಹಚ್ಚೆ-ಚಿತ್ತಾರ

ಹಚ್ಚೆ ಉಯ್ಯಲು ಉಪಯೋಗಿಸುವ ಸಲಕರಣೆಗಳು, ಭೂಮಣ್ಣಿ ಬುಟ್ಟಿ, ಹಚ್ಚಂಬ್ಲಿ ಬುಟ್ಟಿ, ಹಸೆಗೋಡೆ ಚಿತ್ತಾರಗಳು, ತೇರಿನ ಚಿತ್ತಾರ, ಹದಿನಾರು ಮೂಲೆ ಆರತಿ ಚಿತ್ತಾರ, ಬಾಗಿಲು ಚಿತ್ತಾರಗಳು, ಬಾಗಿಲು ತೋರಣಗಳು ಇತ್ಯಾದಿ.

• ಅಡಿಗೆ ಮನೆಯ ಸಲಕರಣೆಗಳು

ಕಡಗೋಲು, ಉಪ್ಪಿನ ಹಂಡೆ, ಮಣ್ಣಿನ ಕೈ ಬಟ್ಟಲು, ಹಿಟ್‌ಕಲ್‌ಬಾನಿ, ಕೊಣಿಗೆ, ಮರಿಗೆ, ಪಡ್ಡಿನ ಹಂಚು, ಸಿಬ್ಬು, ಸೌಟು, ಸೊಟಗು, ಹುಟ್ಟು, ಚೋಂಗಿ ಮಣೆ, ಚಕ್ಕಲಿ ಒರಳು, ಶಾವಿಗೆ ಒರಳು, ಗೋಮು,ತೆಂಗಿನ ಸಾಸಿವೆ ಬುರುಡೆ, ಸೋರೆಯ ಸಾಸಿವೆ ಬುರುಡೆ, ಸಾಂಬಾರು ಕರಡಿಗೆ, ಬಳಪದ ಕಲ್ಗಡಿಗೆ, ಬಳಪದ ಕಲ್ಲಿನ ಜಾಡಿ, ಮಿಳ್ಳೆ ಇತ್ಯಾದಿ.

• ತಾಂಬೂಲದ ಸಲಕರಣೆಗಳು

ನವಿಲಿನಾಕಾರಾದ ತಾಂಬೂಲದ ಡಬ್ಬಿ, ಬಗೆ ಬಗೆಯ ಅಂಡಕೊತ್ತು ಅಥವಾ ಅಡಿಕೆ ಕತ್ತರಿಗಳು, ಸುಣ್ಣಕಾಯಿ ಡಬ್ಬಿಗಳು, ಎಲೆ-ಅಡಿಕೆ ಡಬ್ಬಿಗಳು, ಎಲೆ-ಅಡಿಕೆ ಚೀಲ, ಪೀಕುದಾನಿ ಇತ್ಯಾದಿಗಳು.

• ನಾಣ್ಯಗಳು

ಅರೆಬಿಕ್ ಲಿಪಿಯ ನಾಣ್ಯ, ಈಸ್ಟ್ ಇಂಡಿಯಾ ಕಂಪನಿ, ವಿಕ್ಟೋರಿಯಾ ರಾಣಿ, ಏಳನೆ ಎಡ್ವರ್ಡ್, ಐದನೆ ಜಾರ್ಜ್, ಆರನೇ ಜಾರ್ಜ್ - ೧೮೩೫ ರಿಂದ ೧೮೫೧ರ ಕಾಲದ ಭಾರತದ ಆಣೆ, ಅರ್ಧಾಣೆಯ

೪೫ ನಾಣ್ಯಗಳು. ೧೮೪೭ರ ವಿಕ್ಟೋರಿಯ ರಾಣಿಯ ಬೆಳ್ಳಿಯ ನಾಣ್ಯ. ೧೯೫೧-೧೯೫೫ರ ಕಾಲದ ಭಾರತದ ಒಂದು ಕಾಸು, ೧೯೪೪ರ ಭಾರತದ ತೂತು ಕಾಸು, ೧೯೬೨-೧೯೬೩ರ ಭಾರತದ ತಾಮ್ರದ ಕಾಸು ಮುಂತಾದವು.

• **ಅಳತೆ ಸಾಧನಗಳು**

ತೊಲದ ಬಟ್ಟುಗಳು, ಪಂಚೇರು ಕಲ್ಲು, ಅಡಿಸೇರು ಕಲ್ಲು, ದಡಿಸೇರು ಕಲ್ಲುಗಳು, ಹತ್ತು ಸೇರು-ಹನ್ನೊಂದು ಕಾಲು ಸೇರು ತೂಕದ ಗುಂಡುಗಳು, ಎಣ್ಣೆ ಅಳೆಯುವ ಚಟಾಕು, ಸಿದ್ದೆ, ಕೊಳಗಗಳು ಇತ್ಯಾದಿ.

• **ಗ್ರಾಮೀಣ ವೈದ್ಯಕ್ಕೆ ಸಂಬಂಧಿಸಿದವು**

ದನಗಳಿಗೆ ಸೆಲೆರೋಗ ಬಂದಾಗ ಔಷಧಿ ಹಾಕಿ ಉರುಬಲು ಉಪಯೋಗಿಸುವ ಸೋರೆ ಬುರುಡೆ, ಕುಂದಿಕೆ ಕೇರುವ ಗೊಂಬೆ, ಗೊಟ್ಟ, ಮದ್ದು ಅರೆಯುವ ಪಿಂಗಾಣಿಗುಂಡು ಮತ್ತು ದುಂಡು ಕಲ್ಲುಗಳು ಇತ್ಯಾದಿ.

• **ಓಲೆಗರಿ ಕಡತ**

ಓಲೆಗರಿಗಳ ಕಟ್ಟುಗಳು, ಹಳೆಯ ಕಾಲದ ಕಡತ ಇತ್ಯಾದಿ.

• **ವೃತ್ತಿ ಉಪಕರಣಗಳು**

ಕಮ್ಮಾರ, ಕುಂಬಾರ, ನೇಕಾರ ಬಡಗಿಯವರ ವೃತ್ತಿ ಉಪಕರಣಗಳು.

• **ಸೋಮ-ಹರಿಗೆಗಳು**

ಕೆಂಪು ಸೋಮ, ಹಳದಿ ಸೋಮ, ಕೆಂಪು ಹರಿಗೆ, ಕೆಂಪು ಹರಿಗೆ, ಕರಿಹರಿಗೆ, ಬಿಲ್‌ಕೆಂಚರಾಯ ಇತ್ಯಾದಿ.

• **ರಾಮಾಯಣದ ಚಿತ್ರಗಳಿರುವ ೨೫ ಗಂಜೀಫ ಕಾರ್ಡುಗಳು ಅಥವಾ ಇಸ್ಪೇಟ್ ಕಾರ್ಡುಗಳು.**

• **ಪೌರಾಣಿಕ ಗೊಂಬೆಗಳು**

ಸಿಂಹ, ಶಾರ್ದೂಲ, ಕುದುರೆ, ಕುದುರೆಯ ಮೇಲೆ ಸವಾರರು, ಕಾಮಧೇನು, ಹಂಸ ಇತ್ಯಾದಿ.

• **ಗಾರುಡಿ ಗೊಂಬೆಗಳು**

ಆರೂವರೆ ಅಡಿ ಎತ್ತರದ ಗಾರುಡಿಗೊಂಬೆಗಳು, ಹಾಸ್ಯದ ಮುಖವಾಡಗಳು.

• **ಮುಖವಾಡಗಳು**

ಮೂರು ಮುಖದ ಬ್ರಹ್ಮ, ಸೂರ್ಯ, ಚಂದ್ರ, ಗಣಪತಿ, ಹನುಮಂತ, ನರಸಿಂಹ, ಕಥಕ್ಕಳಿಗಳ ಮುಖವಾಡಗಳು.

• ವಿಶಿಷ್ಟ ಶೈಲಿಯ ಟೆರ್ರಕೋಟ ಮತ್ತು ಮೆಕ್ಕೆಕಟ್ಟೆ ವಿಗ್ರಹಗಳು.

• ಛಾಯಾ ಚಿತ್ರಗಳು ಮತ್ತು ವರ್ಣ ಚಿತ್ರಗಳು

ಜನಪದ ಕಲೆಗಳು, ಹಬ್ಬ, ಮದುವೆ, ಆಚರಣೆಗೆ ಸಂಬಂಧಿಸಿದ ನೂರಾರು ದೊಡ್ಡ ದೊಡ್ಡ ಛಾಯಾಚಿತ್ರ ಹಾಗೂ ವರ್ಣಚಿತ್ರಗಳು.

**ಇತರ ವಸ್ತುಗಳು**

ಎಣ್ಣೆಕುಪ್ಪಿ, ಎಣ್ಣೆಬಟ್ಟಲು, ಅಂಬರ್ ಚರಕ, ಗಾಡಿ ಎರೆಎಣ್ಣೆ ಕೊಂಬು, ಚಿತ್ತಾರದ ಬಿದಿರಿನ ಕೊಳವೆ, ಗಾರೆ ತಿಕ್ಕುವ ಕಲ್ಲು, ಗೇಣಿದಾರ ಮತ್ತು ರೈತರಾಶಿಗೆ ಗುರುತು ಹಾಕುವ ಮುದ್ರೆಕೋಲುಗಳು, ಪಿಠಾರಿಗಳು, ಬೆತ್ತದ ಬುಟ್ಟಿ, ಬೀಸಣಿಗೆ, ದೀಪದ ಅಲಕು, ಸಿಬಿರಿನ ಬೀಗ, ಮರದ ದೌತಿ, ಹಿಟ್ಟುಂಡೆ ಹಿಡಿ, ಅಡಿಕೆ ಮರದ ಮೇಲೆ ಕೂರಲು ಅನುಕೂಲವಾಗುವಂತೆ ಮಾಡಿಕೊಂಡ ಹಲಸಿನ ಬೇರಿನ ಮರದ ಕೊಟ್ಟೆ, ಅಡಿಕೆ ಮರ ಹತ್ತುವವರ ಹಗ್ಗ ಇತ್ಯಾದಿಗಳನ್ನು ಸಿಕ್ಕಿಸಿಕೊಳ್ಳಲು ಉಪಯೋಗಿಸುವ ಮಿಗದ ಕೊಂಬು, ಮಣ್ಣಿನ ಬಟ್ಟಲುಗಳು, ತತ್ರಾಣಿಗಳು, ಹೂಜಿ, ಗೋಲಕಗಳು, ಕಂಡಿಕೆಗಳು, ತುಪ್ಪದ ಕುಡಿಕೆಗಳು, ಮಣ್ಣಿನಿಂದ ಮಾಡಿದ ಚಿನ್ನಿಕಾಯಿ, ದನಗಳ ಕೊರಳಿಗೆ ಕಟ್ಟುವ ಮರದ ಗಂಟೆ ದೊಂಟೆ, ಬಾಯಿಕುಕ್ಕೆ, ಮೀನು ಹಿಡಿಯುವಾಗ ನೀರು ಮೊಗೆಯಲು ಉಪಯೋಗಿಸುವ ವಾಟೆಗೋರಿ, ದನಗಳ ಕೊರಳಿಗೆ ಕಟ್ಟುವ ಕಂದು ಬಣ್ಣದ ಚಪ್ಪಟೆಯ ಹಲ್ಲೆಕಾಯಿ. ಎತ್ತಿನ ಕೊಂಬಣಸು, ತಕ್ಕಡಿ ದಂಡಿಗೆ, ಮೀನುಬಲೆ, ಸೀರಣಿಗೆ, ಬಾಯಿಕಾಯಿ ಪೆಟ್ಟಿಗೆ, ಬೆತ್ತದ ಹಿಡಿ, ದನಗಳನ್ನು ಕಟ್ಟುವ ಕಾಡುಬಳ್ಳಿಯ ಮಂಡುಭೀಳು ಹಗ್ಗ, ಮಳೆಯಲ್ಲಿ ನೆನೆಯದಂತೆ ಬಿದಿರುಕಡ್ಡಿ ಅಡಿಕೆ ರೆಕ್ಕೆಗಳಿಂದ ಮಾಡಿದ ತಳಲೆ, ನೇಗಿಲುಗಳು, ತಲೆಗೆ ಟೋಪಿಯಂತೆ ಹಾಕಿಕೊಳ್ಳುವ ಹಾಳೆಕೊಟ್ಟೆ, ಬತ್ತದ ಗೊನೆಗಳಿಂದ ಹೊಸೆದ ಬಾಗಿಲು ತೋರಣ. ಬತ್ತದ ತೆನೆಯ ಜುಮುಕ್ತಿ, ಸಿದ್ಧಪ್ಪನ ಚಿಲುಮೆ, ದೀಪಸ್ಥಂಭ, ಪುರುವಂತರ ಶಸ್ತ್ರ ಇತ್ಯಾದಿ.[೮]

**ಲೋಕಮಾತಾ ಮಂದಿರ**

ಡಾ. ಎಚ್.ಎಲ್. ನಾಗೇಗೌಡರ ಅಮೂಲ್ಯ ಕಾರ್ಯವನ್ನು ಸಂರಕ್ಷಿಸಲು ಹಾಗೂ ಬೆಳೆಸಲು ಪರಿಷತ್ತು ಹಮ್ಮಿಕೊಂಡಿರುವ ಕಾರ್ಯಕ್ರಮಗಳಲ್ಲಿ ಲೋಕಮಾತಾ ಮಂದಿರದ ನವೀಕರಣವೂ ಒಂದು. ಈ ಮಂದಿರದಲ್ಲಿರುವ ಪ್ರಮುಖ ವಸ್ತುಗಳೆಂದರೆ ಕಸೂತಿ ಚಿತ್ರಪಟಗಳು, ಮಣೆಚೌಕಟ್ಟು, ಊರುಗೋಲು, ನಂದಿಕೋಲು, ನಾಗಬೆತ್ತ, ಯೋಗದಂಡ, ದೀಪದ ಚಕ್ಕೆಗಳು, ತೊಟ್ಟಿಲುಗಳು, ವಿವಿಧ ರೀತಿಯ ಬುಟ್ಟಿಗಳು ಮತ್ತು ಪೆಟ್ಟಿಗೆಗಳು, ಬೀಸುಕಲ್ಲುಗಳು, ವಾಡೆಗಳು ಮತ್ತು ಕಣಜ, ಬಳಪದ ಕಲ್ಲಿನ ಅಡುಗೆ ಪಾತ್ರೆಗಳು, ಪಿಂಗಾಣಿ ಜಾಡಿಗಳು, ತೆಂಗಿನ ಕರಟದ ಸೌಟುಗಳು, ಬಿದಿರಿನ ಅಳತೆ ಸಾಧನಗಳು, ಮಜ್ಜಿಗೆ ಕಡೆಯುವ ವಿವಿಧ ರೀತಿಯ ಮಂತುಗಳು ಮತ್ತು ಮಡಿಕೆಗಳು, ಆಹಾರ ಸಂಸ್ಕರಣ ಮತ್ತು

ಸಂಗ್ರಹಣ ಸಲಕರಣೆಗಳು, ಶಾವಿಗೆ ಒಳ್ಳು, ಬಿದುರಂಡೆಗಳು, ಈಳಿಗೆ ಮಣೆಗಳು, ಅಬೆ ಮಡಿಕೆಗಳು, ವಿವಿಧ ಮಾದರಿಯ ಒಲೆಗಳು, ತಕಡಿಗಳು, ಹರಿಗೋಲು, ದಬ್ಬೆ, ಕತ್ತರಿ, ಕವಣೆಗಳು, ಇಲಿಗತ್ರಿಗಳು, ಹಂದಿ ಗತ್ರಿ, ಹೆಗ್ಗಣದ ಬೋನುಗಳು, ಕುಕ್ಕೆಗಳು, ಕೊಟ್ಟಗಳು, ಕೈಕೋಳಗಳು, ಕೃಷಿ ಸಲಕರಣೆಗಳು, ಪಾತಳ ಗರಡಿ, ಏತದ ಬಾನಿಗಳು, ರಾಟೆ, ಹಸುಗಳ ಕೊರಳಿಗೆ ಕಟ್ಟುವ ಘಂಟೆಗಳು, ಎರೆಣ್ಣೆ ಕೊಂಬು, ಹಂಡೆ, ಗೊರಬು ಇತ್ಯಾದಿಗಳನ್ನು ಒಳಗೊಂಡಿದೆ.

ಹೀಗೆ ಈ ಪ್ರದರ್ಶನದ ಮಂದಿರವನ್ನು ನಾಲ್ಕು ಪ್ರಮುಖ ಭಾಗಗಳಾಗಿ ವಿಂಗಡಿಸಲಾಗಿದೆ. ಅಡುಗೆ ಮನೆ ಮತ್ತು ಉಗ್ರಾಣ, ಗೃಹಬಳಕೆಯ ವಸ್ತುಗಳು, ಪಶುಸಂಗೋಪನೆಯ ಸಲಕರಣೆಗಳು ಹಾಗೂ ಕೃಷಿ ಸಲಕರಣೆಗಳನ್ನು ಒಳಗೊಂಡಿರುವ ಪ್ರತಿಯೊಂದು ಭಾಗವು ಅವುಗಳಿಗೆ ಸಂಬಂಧಪಟ್ಟ ನಿರ್ದಿಷ್ಟವಾದ ಬಳಕೆಯುಳ್ಳ ವಸ್ತುಗಳನ್ನು ಹೊಂದಿದೆ. ಅಡುಗೆ ಮನೆ ವಿಭಾಗದಲ್ಲಿ ಒಲೆ, ಪಾತ್ರೆಗಳು, ಒರಳುಕಲ್ಲು, ಬೀಸುವ ಕಲ್ಲು, ತಟ್ಟೆ ಇತ್ಯಾದಿಗಳನ್ನು ಇಡಲಾಗಿದೆ. ಗೃಹಬಳಕೆಯ ವಸ್ತುಗಳ ವಿಭಾಗದಲ್ಲಿ ಇಂದಿನ ಪೀಠೋಪಕರಣಗಳ ಬಳಕೆಗೆ ಮೊದಲು ಬಳಸುತ್ತಿದ್ದ ಬಹೂಪಯೋಗಿ ಪೆಟ್ಟಿಗೆಗಳು, ಕೊಕ್ಕೆಗಳು, ದೀಪ ಇತ್ಯಾದಿಗಳನ್ನು ಪ್ರದರ್ಶಿಸಲಾಗಿದೆ. ಪಶುಸಂಗೋಪನೆ ಹಾಗೂ ಕೃಷಿ ಸಲಕರಣೆಗಳು ಹೆಚ್ಚು ವೈವಿಧ್ಯಮಯವಾಗಿದ್ದು, ಅವುಗಳನ್ನು ಕೃಷಿ ಕೆಲಸಕ್ಕೂ ಸಾಕು ಪ್ರಾಣಿಗಳನ್ನು ಹಿಡಿತದಲ್ಲಿ ಇಡಲೂ, ಕಾಡು ಪ್ರಾಣಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲೂ ಬಳಸಲಾಗುತ್ತಿತ್ತು.[೯]

ನಿರ್ದಿಷ್ಟ ಜಾತಿ, ಸಮುದಾಯದವರು ಬಳಸುತ್ತಿದ್ದ ವಸ್ತುಗಳ ಉಪಯೋಗ ಹಾಗೂ ಬಳಕೆಯ ಪ್ರಕ್ರಿಯೆಗಳನ್ನು ತಿಳಿಸಲು ಅವುಗಳನ್ನು ಬೇರೆ ಬೇರೆ ವಿಭಾಗದಲ್ಲಿ ವಿಂಗಡಿಸಲು ನಿರ್ಧರಿಸಲಾಗಿದೆ. ಇಲ್ಲಿನ ವಸ್ತುಗಳು ಕೇವಲ ಪ್ರದರ್ಶನಕ್ಕೆ ಇಟ್ಟ ನಿರ್ಜೀವ ವಸ್ತುಗಳಾಗಿರದೆ, ಸಾಂದರ್ಭಿಕವಾಗಿ ಅವುಗಳಿಗೆ ಅದರದೇ ಆದ ಮಹತ್ವವಿದೆ. ಪ್ರತಿಯೊಂದು ವಸ್ತುವಿಗೂ ನೀಡಲಾದ ವಿವರಣೆಯು ಅವುಗಳನ್ನು ತಯಾರಿಸಿದ ಕಾಲ, ಉಪಯೋಗಿಸಿದ ಸಾಮಗ್ರಿಗಳು, ಬಳಕೆಯ ಪ್ರದೇಶ ಹಾಗೂ ಅವುಗಳ ಬಳಕೆಯ ಪಾರಂಪರಿಕ ಹಾಗೂ ಸಾಂಪ್ರದಾಯಿಕ ಮಹತ್ವನ್ನು ತಿಳಿಸುತ್ತದೆ.

ಗ್ರಾಮೀಣ ಕರ್ನಾಟಕದ ಶ್ರೀಮಂತ ಸಾಂಸ್ಕೃತಿಕ ಬದುಕನ್ನು ಲೋಕಮಾತಾ ಮಂದಿರವು ಯಶಸ್ವಿಯಾಗಿ ಪ್ರತಿಬಿಂಬಿಸುತ್ತಿದೆ ಎಂಬುದು ನಮ್ಮ ನಂಬಿಕೆಯಾಗಿದೆ. ಪ್ರಾಕೃತಿಕ ಸೃಷ್ಟಿಗಳು ಮಾನವ ಸಮಾಜದ ಬೆಳವಣಿಗೆಯಲ್ಲಿ ಪ್ರಮುಖ ಸ್ಥಾನ ಹೊಂದಿವೆಯಾದರೂ ಒಂದು ಪ್ರದೇಶದ ಸಾಂಸ್ಕೃತಿಕ ಜೀವನವು ರೂಪುಗೊಳ್ಳುವಲ್ಲಿ ಅಲ್ಲಿನ ವಸ್ತು ಸಂಸ್ಕೃತಿಯು ಪ್ರಮುಖ ಪಾತ್ರವಹಿಸುತ್ತದೆ.

ಇಂದಿನ ಜೀವನದ ಶೈಲಿಗಿಂತ ಬಹಳ ಭಿನ್ನವಾದ ರೀತಿಯಲ್ಲಿ ಬದುಕುತ್ತಿದ್ದ ಜನರಿಂದ ತಯಾರಿಸಲ್ಪಟ್ಟು ಬಳಕೆಗೊಳ್ಳುತ್ತಿದ್ದ ಈ ವಸ್ತುಗಳು ಇಂದು ದಿನಬಳಕೆಯಲ್ಲಿ ಇಲ್ಲದಿದ್ದರೂ ಇವುಗಳ ಮಾಟ, ಉಪಯುಕ್ತತೆ, ವಸ್ತು ಮತ್ತು ಮನುಷ್ಯನ ನಡುವಣ ನಿಕಟ ಸಂಬಂಧ, ಮನುಷ್ಯ ಹಾಗೂ ಪ್ರಾಣಿಗಳ ಮಧ್ಯೆಯಿರುವ ಸಂಬಂಧ, ಇಂದಿಗೂ ಅರ್ಥೈಸಿಕೊಳ್ಳಬೇಕಾದ ವಿಷಯವೇ ಆಗಿದೆ.

**ಚಿತ್ರಕುಟೀರ**

ಜಾನಪದ ಲೋಕದ ಮತ್ತೊಂದು ಪ್ರಮುಖ ವಿಭಾಗವೆಂದರೆ ಚಿತ್ರಗಳ ಮೂಲಕ ನೋಡುಗರ ಕಣ್ಮನ ಸೆಳೆಯುವ ಚಿತ್ರಕುಟೀರ. ಇದು ನಾಗೇಗೌಡರ ಜನಪದ ಬೆಳವಣಿಗೆಯನ್ನು ಪ್ರತಿಬಿಂಬಿಸುವ ಕೇಂದ್ರವಾಗಿದೆ. ಈ ಚಿತ್ರಕುಟೀರದಲ್ಲಿ ಪ್ರದರ್ಶಿತಗೊಂಡಿರುವ ಆಕರ್ಷಕ ವರ್ಣಚಿತ್ರಗಳು, ನಾಡಿನ ಹಬ್ಬ, ಕಲೆ, ಆಚರಣೆ, ಜಾತ್ರೆಗಳನ್ನು ನಮ್ಮ ಕಣ್ಣು ಮುಂದೆ ತಂದು ನಿಲ್ಲುತ್ತವೆ.

ಈ ವಿಭಾಗದಲ್ಲಿ ಧ್ವನಿ ಮುದ್ರಿಕೆಗಳ ಆಡಿಯೋ ವೀಡಿಯೋ ಕ್ಯಾಸೆಟ್‌ಗಳು, ಸ್ಲೈಡ್‌ಗಳು, ಛಾಯಾ ಚಿತ್ರಗಳು, ಜಾನಪದ ವಸ್ತುಗಳು, ಪುಸ್ತಕಗಳು, ಹಸ್ತಪ್ರತಿಗಳು, ಅಪರೂಪದ ಗ್ರಂಥಗಳ ಸಂಗ್ರಹ ಪ್ರದರ್ಶನಗೊಂಡಿವೆ. ಜನಪದ ಕಲೆಗಳು, ಜನಪದರ ಆಚಾರ-ವಿಚಾರ, ಸಂಪ್ರದಾಯ ಹಬ್ಬ-ಹರಿದಿನ ಮತ್ತು ವಿವಿಧ ಬುಡಕಟ್ಟು ಸ್ತ್ರೀ-ಪುರುಷರ ವೇಷ-ಭೂಷಣಗಳು ಹಾಗೂ ವಿವಿಧ ಜನಾಂಗಗಳಲ್ಲಿ ಕಂಡುಬರುವ ಆಚರಣೆಗಳು ಒಟ್ಟಾರೆ ಜನಪದರ ಜೀವನ ಕ್ರಮವನ್ನೇ ಪ್ರತಿಬಿಂಬಿಸುವ ಛಾಯಾಚಿತ್ರಗಳನ್ನು ಇಲ್ಲಿ ಕಾಣಬಹುದು.

ದೊಡ್ಡಾಟ-ಸಣ್ಣಾಟ, ಸಂಗ್ಯಾ-ಬಾಳ್ಯಾ ಮತ್ತು ಯಕ್ಷಗಾನದ ಪಾತ್ರಧಾರಿಗಳು ಯಾವ ರೀತಿ ಪಾತ್ರ ಸಿದ್ಧತೆಯಲ್ಲಿ ತೊಡಗಿರುತ್ತಿದ್ದರೂ ಮತ್ತು ಅವರೇ ಸ್ವತಃ ಮುಖಕ್ಕೆ ಬಣ್ಣ ಹಚ್ಚಿಕೊಳ್ಳುವಲ್ಲಿ ಹೇಗೆ ಕಲಾತ್ಮಕತೆಯನ್ನು ಮೆರೆಯುತ್ತಿದ್ದರು ಎಂಬುದನ್ನು ಇಲ್ಲಿ ಸಂಗ್ರಹಿಸಿರುವ ಛಾಯಾ ಚಿತ್ರಗಳಿಂದ ಕಾಣಬಹುದಾಗಿದೆ.

ನಾಗೇಗೌಡರ ತಪಸ್ಸಿನೋಪಾದಿಯಲ್ಲಿ ಕೈಗೊಂಡ ಧ್ವನಿಮುದ್ರಣಗಳು ಹಾಗೂ ಚಿತ್ರೀಕರಣ ದೃಶ್ಯ ಮಾಧ್ಯಮಗಳನ್ನು ಇಲ್ಲಿ ಅಚ್ಚುಕಟ್ಟಾಗಿ ಸಂಗ್ರಹಿಸಲಾಗಿದೆ. ನಾಗೇಗೌಡರು ವಿವಿಧ ಸ್ಥಳಗಳಿಗೆ ಹೋದಾಗ ಅಲ್ಲಿ ದೊರೆತ ಜಾನಪದ ವಸ್ತು ಸಂಗ್ರಹ ಕಾರ್ಯ ಮೊದಲಾದ ಕಾರ್ಯಗಳ ಸಂದರ್ಭದ ಛಾಯಾಚಿತ್ರ ಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ ಹಾಗೂ ಅವರು ಜೀವನದಲ್ಲಿ ನಿತ್ಯವು ಬಳಸುತ್ತಿದ್ದ ದಿನಬಳಕೆ ವಸ್ತುಗಳನ್ನು ಇಲ್ಲಿ ಕಾಣಬಹುದಾಗಿದೆ.[10] ಜೊತೆಗೆ ಗೌಡರ ಬಾಳು ಬದುಕು, ಧ್ಯೇಯ-ಧೋರಣೆ, ಸಿದ್ಧಿ-ಸಾಧನೆಗಳ ಬಗ್ಗೆ ಚಿತ್ರಗಳನ್ನು ಇಲ್ಲಿ ಪ್ರದರ್ಶಿಸಲಾಗಿದೆ ಹಾಗೂ ಅವರು ರಚಿಸಿದ ಗ್ರಂಥಗಳು, ಕೃತಿಗಳು, ಕಥೆ, ಕಾದಂಬರಿಗಳು, ಅವರ ಜೀವನ ಚರಿತ್ರೆ, ಜಾನಪದ ಯಾತ್ರೆ, ಸಂಪುಟಗಳು ಮೊದಲಾದವುಗಳನ್ನು ಇಲ್ಲಿ ನೋಡಬಹುದು.

**ಶಿಲ್ಪಮಾಳ**

ಜಾನಪದ ಲೋಕದ ಸಾಂಸ್ಕೃತಿಕ ಸೌರಭವನ್ನು ಪಸರಿಸಲೆಂದು ನಿರ್ಮಿಸಲ್ಪಟ್ಟ ವಿಧಾನಗಳಲ್ಲಿ ಶಿಲ್ಪಮಾಳವು ಒಂದು. ಇಲ್ಲಿ ಸುಮಾರು ಒಂದು ಸಾವಿರದ ಎರಡು ನೂರು ವರ್ಷಗಳಿಗೂ ಹಿಂದಿನ ವೀರಗಲ್ಲುಗಳನ್ನು ನೋಡಬಹುದಾಗಿದೆ. ಜೊತೆಗೆ ಸತೀಕಲ್ಲುಗಳು ವಿವಿಧ ಬಗೆಯಲ್ಲಿರುವುದು ನಮಗೆ

ತಿಳಿಯುತ್ತದೆ. ಪ್ರಾಚೀನ ಕಾಲದ ಶಾಸನವನ್ನು ಇಲ್ಲಿ ಕಾಣಬಹುದು ಹಾಗೂ ತುರುಗೋಳ್ ಸಹ ಐತಿಹಾಸಿಕ ನೆನಪನ್ನು ಮಾಡುತ್ತದೆ. ಬೃಹದಾಕಾರದ ಫಿರಂಗಿಯನ್ನು ಇಲ್ಲಿ ನೋಡಬಹುದು. ಕ್ರಿ.ಶ. ೧೯೦೨ರ ಕಾಲದ ಮರದ ರಥ (ತೇರನ್ನು) ಶಿಲ್ಪಮಾಳದಲ್ಲಿ ನೋಡಬಹುದು. ಈ ರಥವು ಶಿವ, ವಿಷ್ಣು, ಗಣಪತಿ, ಷಣ್ಮುಖ, ಪಾರ್ವತಿ, ಸರಸ್ವತಿ, ಅಷ್ಟದಿಕ್ಪಾಲಕರು, ಋಷಿಗಳು, ವೀರರು, ಹುಲಿಸಿಂಹಗಳು, ಮಿಥುನ ಶಿಲ್ಪಗಳ ಸುಂದರ ಪಟ್ಟಿಕೆಗಳಿರುವ ಆಕಾರವನ್ನು ಹೊಂದಿದೆ. ಈ ರಥದಲ್ಲಿ ಇಂಗ್ಲೆಂಡಿನ ರಾಣಿ ವಿಕ್ಟೋರಿಯಾ ಅವರ ಪಟ್ಟಿಕೆ ಅಳವಡಿಸಿರುವುದು ಒಂದು ವಿಶೇಷವಾಗಿದೆ. ಹೀಗೆ ಶಿಲ್ಪಮಾಳದ ಈ ಅಂಶಗಳು ತಮ್ಮ ಗತಕಾಲದ ಚರಿತ್ರೆಯನ್ನು ಹೇಳುತ್ತಾ ಇಲ್ಲಿ ನಿಂತಿವೆ. ರಾಜಮಹಾರಾಜರುಗಳ ಕಾಲದ ಬೃಹದಾಕಾರದ ಕಲ್ಲಿನ ತೊಟ್ಟಿಗಳನ್ನು ಇಲ್ಲಿ ಕಾಣಬಹುದು.

**ಆಯಾಗಾರರ ಮಾಳ**

ಜಾನಪದ ಲೋಕದ ವಿಶಿಷ್ಟ ಅಂಶಗಳಲ್ಲಿ ಆಯಾಗಾರರ ಮಾಳವು ಪ್ರಮುಖವಾದುದು. ಇಲ್ಲಿ ಕಣ್ಮರೆಯಾಗುತ್ತಿರುವ ಹಳ್ಳಿಯ ಕಸುಬುಗಳಾದ ಕುಂಬಾರಿಗೆ ಹಾಗೂ ಕಮ್ಮಾರಿಕೆಯನ್ನು ನೋಡಬಹುದು. ಇಲ್ಲಿ ವಿವಿಧ ಬಗೆಯ ಮಣ್ಣಿನಿಂದ ಮಾಡಿದ ಮಡಿಕೆಗಳು, ಕಲಾಕೃತಿಗಳನ್ನು ಇಲ್ಲಿಯೇ ತಯಾರಿಸಿ ಪ್ರದರ್ಶನಕ್ಕೆ ಇಟ್ಟಿರುವುದನ್ನು ನೋಡಬಹುದು. ಈ ಕಲಾಕೃತಿಗಳು ಪ್ರವಾಸಿಗರನ್ನು ಕಣ್ಮನ ಸೆಳೆಯುತ್ತವೆ. ಜಾನಪದ ಲೋಕಕ್ಕೆ ಬರುವ ಎಲ್ಲಾ ಪ್ರೇಕ್ಷಕರು ಈ ಆಯಾಗಾರ ಮಾಳಕ್ಕೆ ಭೇಟಿ ಮಾಡಿ ಅವರು ಹೇಗೆ ವಿವಿಧ ಭಂಗಿಗಳಲ್ಲಿ ಕರಕುಶಲ ವಸ್ತುಗಳನ್ನು ತಯಾರಿಸಿ ಪ್ರದರ್ಶಿಸುತ್ತಾರೆ ಎಂಬುದನ್ನು ತಿಳಿದುಕೊಂಡು ಬರುತ್ತಾರೆ. ಇದರ ಜೊತೆಗೆ ಇಲ್ಲಿ ಮರದ ಕಬ್ಬಿನಗಾಣವನ್ನು, ಎಣ್ಣೆಗಾಣವನ್ನು, ಕೊಟ್ಟಣವನ್ನು ಇಲ್ಲಿ ಪ್ರದರ್ಶನಕ್ಕೆ ಇಟ್ಟಿದ್ದಾರೆ. ಇವುಗಳ ಪಕ್ಕದಲ್ಲಿ ವಿವಿಧ ಬಗೆಯ ಬೇಸಾಯದ ಸಲಕರಣೆಗಳನ್ನು ವಿವಿಧ ಆಯಾಮಗಳಲ್ಲಿ ಪ್ರದರ್ಶಿಸಲಾಗಿದೆ.

ಹೀಗೆ ಆಯಾಗಾರರ ಮಾಳವು ಈ ಮೇಲಿನ ವಿಶಿಷ್ಟ ಅಂಶಗಳನ್ನು ಒಳಗೊಂಡಿದೆ.

**೩.೨. ಸಂರಕ್ಷಣೆ** 

ಇತ್ತೀಚಿನ ದಿನಗಳಲ್ಲಿ ಜಾನಪದ ಅಳಿವು-ಉಳಿವಿನ ಬಗ್ಗೆ ತೀವ್ರವಾದ ಚರ್ಚೆ ವಿದ್ವಾಂಸರಲ್ಲಿ ನಡೆಯುತ್ತಿದೆ. ಬದಲಾಗುತ್ತಿರುವ ಸಂದರ್ಭದಲ್ಲಿಯೂ ಜಾನಪದವು ಪರಿವರ್ತಿತ ರೀತಿಯಲ್ಲಿ ಉಳಿದುಕೊಂಡು ಬರುತ್ತದೆ ಎಂದು ಒಂದು ವಾದವಾದರೆ, ಇನ್ನೊಂದು ವಾದ ತೀವ್ರವಾಗಿ ಬದಲಾಗುತ್ತಿರುವ ಸಮಾಜದಲ್ಲಿ ಜಾನಪದ ಬೆಳೆದು ಬರಲು ಸಾಧ್ಯವಿಲ್ಲ, ಅದು ಉಳಿಯುವುದು ಇಲ್ಲ. ಆದ್ದರಿಂದ ಜಾನಪದ ವಸ್ತುಗಳು, ಕಲೆ, ಪ್ರದರ್ಶನ, ಮುಂತಾದವುಗಳ ಸಂರಕ್ಷಣೆ ಆಗಬೇಕು ಎಂಬುದಾಗಿದೆ.[೧೧]

ಈ ಎರಡನೇ ಧೋರಣೆಯನ್ನು ಕರ್ನಾಟಕ ಜಾನಪದ ಪರಿಷತ್ತು ಹೊಂದಿದೆ ಮತ್ತು ಅದಕ್ಕೆ ತಕ್ಕಂತೆ ಅಪಾರವಾದ ಕೆಲಸವನ್ನು ಮಾಡುತ್ತಿದೆ. ನಮ್ಮ ಅಭಿಪ್ರಾಯದಲ್ಲಿ ಈಗಿರುವ ಜಾನಪದ ವಸ್ತುಗಳು,

ಕಲೆಗಳು, ಪ್ರದರ್ಶನಗಳು, ಸಂಸ್ಕೃತಿ ಉಳಿಯುವುದಿಲ್ಲ. ಉಳಿಯುವುದಕ್ಕೆ ಬೇಕಾದ ಸಮಯ, ಸಂದರ್ಭ ಪರಿಸರವೂ ಇಲ್ಲ. ಮೊದಲನೆಯ ಧೋರಣೆಯನ್ನು ನಾವು ಒಪ್ಪಲು ಮನಸ್ಸು ಬಾರದು. ನಾವು ಉಳಿಸಬೇಕೆಂದಿರುವುದು ಸಹಸ್ರಾರು ವರ್ಷಗಳಿಂದ ನಮ್ಮ ಪೂರ್ವಜರು ಉಳಿಸಿ ಆಚರಿಸಿಕೊಂಡು ಬಂದ ಜಾನಪದ ವಸ್ತು, ಕಲೆ, ಪ್ರದರ್ಶನ, ಮೊದಲಾದವುಗಳನ್ನು ಸಂರಕ್ಷಣೆ ಮಾಡುವ ಜವಾಬ್ದಾರಿ ನಮ್ಮ ಮೇಲಿದೆ.

ಸಹಸ್ರಾರು ವರ್ಷಗಳು ಜನಜೀವನವನ್ನು ಅಪ್ಪಿ ಆಲಂಗಿಸಿ ಹರ್ಷವನ್ನುಂಟು ಮಾಡಿದ ಆ ಸಂಪತ್ತು ನಮ್ಮ ಕೈ ಜಾರುತ್ತಿವೆ. ಈ ಶತಮಾನದಲ್ಲಾದ ಅಪಾರ ತಾಂತ್ರಿಕ ಹಾಗೂ ವೈಜ್ಞಾನಿಕ ಬೆಳವಣಿಗೆಗಳು ಯಾವ ಶತಮಾನದಲ್ಲೂ ಆಗಿಲ್ಲ. ನಾವು ಇದನ್ನು ಸ್ಪಷ್ಟವಾಗಿ ಅರಿತುಕೊಂಡರೆ ನಾವು ನಮ್ಮ ಕಿವಿ ಮರೆಯಾಗುತ್ತಿರುವ ಹಾಡುಗಳನ್ನು, ಕಣ್ಮರೆಯಾಗುತ್ತಿರುವ ಜನಪದ ವಸ್ತು, ಕಲೆ, ಪ್ರದರ್ಶನಗಳನ್ನು ಉಳಿಸಲು ಪ್ರಯತ್ನ ಮಾಡುವುದರಲ್ಲಿ ಸಂದೇಹವಿಲ್ಲ. ಉಳಿಸುವುದೆಂದರೆ ಹೆಂಗಸರು ಬೆಳಗ್ಗೆ ಎದ್ದು ರಾಗಿ ಬೀಸಲಿ, ಬತ್ತ ಕುಟ್ಟಲಿ ಎಂದಲ್ಲ. ಆದರೆ ಆ ರಾಗಿ ಬೀಸುವ, ಬತ್ತ ಕುಟ್ಟುವ ವಸ್ತುಗಳನ್ನಾದರೂ ಸಂರಕ್ಷಿಸುವುದು ನಮ್ಮ ಜವಾಬ್ದಾರಿಯಾಗಿದೆ.

ಸಂಗ್ರಹಿಸಿದ ವಸ್ತುಗಳನ್ನು ಕ್ರಿಮಿಕೀಟ, ಧೂಳು, ಶಾಖ, ತೇವ ಮೊದಲಾದ ಉಪದ್ರವಗಳಿಂದ ಸಂರಕ್ಷಿಸುವುದೂ ಕೂಡ ಬಹು ಮುಖ್ಯವಾದ ಜವಾಬ್ದಾರಿ. ಆಯಾ ವಸ್ತುವಿನ ಸ್ವರೂಪಕ್ಕನುಗುಣವಾಗಿ ಸಂರಕ್ಷಣೆಯ ವಿಧಾನಗಳನ್ನು ಸಹ ರೂಪಿಸಿಕೊಳ್ಳಬೇಕಾಗುತ್ತದೆ. ವಸ್ತುಸಂಗ್ರಹಾಲಯಗಳು ತೀರ ದೊಡ್ಡವೂ ಆಗ ಕೂಡದು, ತೀರ ಚಿಕ್ಕವೂ ಆಗ ಕೂಡದು. ಸಂಗ್ರಹಿಸಿದ ವಸ್ತುಗಳ ಭಾರದಿಂದ ಅವು ತತ್ತರಿಸುವಂತಿರ ಬಾರದು. ಅವುಗಳನ್ನು ನೋಡುವುದು ಒಂದು ಆಹ್ಲಾದಕರ ಅನುಭವ ಎನಿಸುವಂತಿರಬೇಕು. ಹೀಗೆ ಈ ಕೆಳಕಂಡ ಕ್ರಮಗಳ ಮೂಲಕ ಜಾನಪದ ವಸ್ತುವಿಶೇಷಗಳನ್ನು ಸಂರಕ್ಷಿಸಬಹುದು.

**ಸಂರಕ್ಷಣಾ ಕ್ರಮಗಳು**

**ಮ್ಯೂಸಿಯಂ ಕಟ್ಟಡ**

ಮ್ಯೂಸಿಯಂಗೆ ಅಗತ್ಯವಾದ ಕಟ್ಟಡವನ್ನು ಕಟ್ಟುವ ಮುನ್ನ ಸೂಕ್ತ ಸ್ಥಳ ಆಯ್ದುಕೊಳ್ಳುವುದು, ತಜ್ಞರ ಸಲಹೆ ಮೂಲಕ ಅದರ ವಿನ್ಯಾಸ ಸಿದ್ಧತೆ ಮಾಡಿಕೊಳ್ಳುವುದು, ಹಾಗೆಯೇ ಗೆದ್ದಲು ಹುಳುಗಳಂತಹ ಕ್ರಿಮಿಗಳಿಂದಾಗುವ ಅಪಾಯಗಳ ಸಂರಕ್ಷಣೆಗಾಗಿ ಕಟ್ಟಡದ ಅಡಿಪಾಯದ ಹಂತದಲ್ಲಿ, ತಳಪಾಯದ ಭಾಗಗಳಿಗೆ ಸೆಟ್‌ಮೆಂಟ್ ಮಾಡುವುದು ಬಹುಮುಖ್ಯವಾದುದು. ಮ್ಯೂಸಿಯಂಗಳಲ್ಲಿ ಪ್ರದರ್ಶಿಸುವ ವಸ್ತುಗಳು ಹಾಗೂ ಅಗತ್ಯ ಗಾಳಿ ಬೆಳಕಿನ ಕುರಿತು ವಿಶೇಷ ಗಮನ ಕೊಡುವುದು.

**ಮಾಲಿನ್ಯತೆ**

ಮ್ಯೂಸಿಯಂಗಳ ಒಳಗೆ ಮತ್ತು ಹೊರಗೆ ಸದಾ ಶುಚಿಯಾಗಿಡುವುದು ಗಾಳಿ ಮತ್ತು ನೀರಿನಿಂದ ವಸ್ತುಗಳು ಹಾಳಾಗುವುದು, ಗಾಳಿಯಲ್ಲಿ ವಿಪರೀತ ತೇವಾಂಶ ಚರ್ಮ, ಬಟ್ಟೆಯಂತಹ ವಸ್ತುಗಳ ಮೇಲೆ

ಹೆಚ್ಚಿನ ಪರಿಣಾಮ ಉಂಟುಮಾಡುತ್ತದೆ. ಲೋಹ, ಮರದ ವಸ್ತುಗಳ ಮೇಲು ಇವುಗಳಿಂದ ಪರಿಣಾಮ ಉಂಟಾಗುತ್ತದೆ. ಕಸಗುಡಿಸುವಾಗ ಧೂಳು ಮೇಲೇಳದಂತೆ ನೋಡಿಕೊಳ್ಳುತ್ತ ಗುಡಿಸಬೇಕು. ವ್ಯಾಕ್ಯೂಮ್‌ಕ್ಲೀನರ್ ಬಳಸುವುದು ಬಹಳ ಒಳ್ಳೆಯದು. ವಿಪರೀತ ಸೋರುವ ನೀರಿನ ಟ್ಯಾಂಕ್‌ಗಳು ಸಂಗ್ರಹಾಲಯಗಳಿಂದ ದೂರವಿರಬೇಕು. ಮ್ಯೂಸಿಯಂಗಳ ಮಾಲಿನ್ಯ ರಹಿತವಾಗಿರುವಂತೆ ನೋಡಿ ಕೊಳ್ಳಬೇಕು. ಅಗತ್ಯ ಅಂತರದಲ್ಲಿ ಹಸಿರಿನ ಗಿಡಮರಗಳನ್ನು ಬೆಳೆಸುವುದು ಒಳ್ಳೆಯದು.

**ಕ್ರಿಮಿಗಳಿಂದಾಗುವ ಅಪಾಯ**

ಬಟ್ಟೆ, ಕಾಗದ, ಚರ್ಮ, ಮರದಂತಹ ವಸ್ತುಗಳ ಸಿಲ್ವರ್‌ಫಿಶ್, ಗೆದ್ದಲುಹುಳು, ಜಿರಲೆ, ಫಂಗಿ, ಮರಕೊರೆಯುವ ಹುಳು ಮೊದಲಾದ ಕ್ರಿಮಿಗಳಿಂದ ಅಪಾಯ ಹೆಚ್ಚು. ಇಂತಹ ಸಂದರ್ಭದಲ್ಲಿ ಅಂತಹ ವಸ್ತುಗಳನ್ನು ಫ್ಯೂಮಿಗೇಷನ್ ಛೇಂಬರ್‌ಗಳಲ್ಲಿಟ್ಟು ಅವುಗಳಿಂದ ಸಂರಕ್ಷಣೆ ಪಡೆಯಬೇಕು. ಏಳು ದಿವಸಗಳ ಕಾಲ ಹೀಗೆ ಫ್ಯೂಮಿಗೇಷನ್ ಛೇಂಬರ್‌ನಲ್ಲಿ ಇಡುವುದರಿಂದ ಅಂತಹ ವಸ್ತುಗಳನ್ನು ಸಂರಕ್ಷಿಸಬಹುದು.

ವಸ್ತುಗಳನ್ನು ಸ್ಟೋರೇಜ್‌ನಲ್ಲಿ ಇಡುವಾಗ ಪ್ಲಾಸ್ಟಿಕ್‌ಶೀಟ್ ಹಾಕಿ ಇಡಬಹುದು. ಚಿಕ್ಕ ವಸ್ತುಗಳನ್ನು ಪ್ಲಾಸ್ಟಿಕ್ ಕವರ್‌ನಲ್ಲಿ ಇಡುವುದು ಒಳ್ಳೆಯದಲ್ಲ. ಒಳಗಿನ ತೇವಾಂಶಕ್ಕೆ ವಸ್ತು ಹಾಳಾಗಬಹುದು. ಹಾಗಾಗಿ ಪಾಲಿಎಥಲಿನ್ ಪ್ಲಾಸ್ಟಿಕ್ ಚೀಲಗಳನ್ನು ಬಳಸಬೇಕು. ವಸ್ತುಗಳನ್ನು ಹ್ಯಾಂಡಲ್ ಮಾಡಲು ಕಾಟನ್ ಗ್ಲೌಸ್‌ಗಳನ್ನು ಬಳಸಬೇಕು. ಹೊಸದಾಗಿ ತಂದ ವಸ್ತುಗಳನ್ನು ಫ್ಯೂಮಿಗೇಷನ್ ಛೇಂಬರ್‌ಗೆ ಹಾಕಿ ನಂತರ ಇಡುವುದು ಒಳ್ಳೆಯದು.

**ಮ್ಯೂಸಿಯಂ ವಾತಾವರಣ ಸಂರಕ್ಷಣೆ**

ಸೂರ್ಯನ ನೇರ ಬೆಳಕು ವಸ್ತುಗಳ ಮೇಲೆ ನೇರವಾಗಿ ಬೀಳದಂತೆ ವಸ್ತುಗಳನ್ನು ಜೋಡಿಸಬೇಕು. ಬೆಳಕಿಗೆ ಟ್ಯೂಬ್‌ಲೈಟ್ ಬಳಸುವಾಗ 'ಫಿಲಿಪ್ಸ್' ಓಶಾಕ್‌ನಂತಹ ಕಂಪನಿಟ್ಯೂಬ್‌ಗಳನ್ನು ಬಳಸುವುದು ಒಳ್ಳೆಯದು. ಮಾರ್ಕೆಟ್‌ನಲ್ಲಿ ಸಿಗುವ ಯಾವ ಯಾವುದೋ ಟ್ಯೂಬ್‌ಲೈಟ್ ಬಳಸುವುದು ಒಳ್ಳೆಯದಲ್ಲ.

ಮ್ಯೂಸಿಯಂ ಒಳಗೆ ೪೫ ರಿಂದ ೫೦ ಲಕ್ಸ್‌ನಷ್ಟು ಬೆಳಕು ಇರುವಂತೆ ನೋಡಿಕೊಳ್ಳಬೇಕು. ಅತ್ಯಂತ ಹೆಚ್ಚು ಬೆಳಕು ಅಳವಡಿಸಿದರೆ ವಸ್ತುವಿಗೆ ಧಕ್ಕೆಯಾಗುತ್ತದೆ. ಬೆಳಕಿನ ಲಕ್ಸ್‌ಅನ್ನು ಲಕ್ಸ್ ಮೀಟರ್ ಮೂಲಕ, ಟೆಂಪರೇಚರ್ ಅನ್ನು ಥರ್ಮಾಮೀಟರ್ ಮೂಲಕ ಅಳತೆ ಮಾಡಿ ನೋಡಬೇಕು. ಮ್ಯೂಸಿಯಂ ಒಳಗೆ ರಿಲೇಟಿವ್ ಹ್ಯೂಮಿಡಿಟಿ ಮತ್ತು ಟೆಂಪರೇಚರ್‌ಗಳ ಕುರಿತು ಒಂದು ಹಂತವನ್ನು ಕಾಯ್ದುಕೊಳ್ಳಬೇಕು. ಹೀಗೆ ಕಾಯ್ದುಕೊಳ್ಳಲು ಇರುವ ಉತ್ತಮ ಮಾರ್ಗ ಮ್ಯೂಸಿಯಂ ಅನ್ನು ಎ.ಸಿ.ಗೆ ಅಳವಡಿಸುವುದು. ಎ.ಸಿ.ಗೆ ಅಳವಡಿಸಿದರೂ ಅದು ೨೪ ಗಂಟೆಯೂ ಚಾಲೂ ಇರುವಂತೆ ನೋಡಿ ಕೊಳ್ಳಬೇಕು. ಪ್ರದರ್ಶನದ ವಸ್ತುವಿನ ಮೇಲೆ ಲೈಟ್‌ನ ಕಿರಣಗಳು ನೇರವಾಗಿ ಬೀಳಬಾರದು ಮತ್ತು ಕನಿಷ್ಟ ೫ ಅಡಿ ಅಂತರವಿರಬೇಕು. ಒಬ್ಬ ಮನುಷ್ಯ ಮ್ಯೂಸಿಯಂ ಒಳಗೆ ಇದ್ದರೆ ಒಂದು ಲೀಟರ್

ನೀರು ಹೊರಬರುತ್ತದೆ. ಇದರಿಂದ ವಾತಾವರಣ ಮತ್ತು ವಸ್ತುವಿನ ಮೇಲೆ ಪರಿಣಾಮ ಉಂಟಾಗುತ್ತಲೇ ಇರುತ್ತದೆ.

ಪೇಟಿಂಗ್ ಗ್ಯಾಲರಿಗಳು ಪ್ರತ್ಯೇಕ ಇರುವುದು, ಸಾಧ್ಯವಾದಷ್ಟು ಕೊನೆಯಲ್ಲಿ ಇರುವುದು ಒಳ್ಳೆಯದು. ಪ್ರತಿ ಶೋಕೇಸಿನಲ್ಲಿ ನೀಲಿ ಸಿಲಿಕಾಜಲ್ ಇಡುವುದು ಉತ್ತಮ. ಇದು ಹ್ಯೂಮಿಡಿಟಿ ಹೆಚ್ಚಿದರೆ ಕಡಿಮೆ ಮಾಡುತ್ತದೆ. ಆಲ್ಕೋಹಾಲಿನಿಂದ ಫಂಗಸ್ ಕ್ಲೀನ್ ಮಾಡಬಹುದು.

ಮ್ಯೂಸಿಯಂಗಳಲ್ಲಿ ಬೇವಿನ ಎಣ್ಣೆಗೆ ಕರ್ಪೂರ ಬಳಸಿ ಇಲ್ಲವೆ ಒಣಗಿದ ಬಾಳೆಹಣ್ಣಿನ ಸಿಪ್ಪೆ ಅದ್ದಿ ನೀರಿನ ಅಂಶವನ್ನು ತೆಗೆಯುವುದು ಒಳ್ಳೆಯದು. ಬೇವು ಹೊಗೆಯಂತಹ ಬೀಜಗಳನ್ನು ಇಡಬಹುದು. ಶೋಕೇಸ್‌ಗಳ ಲೈಟ್ ಕೆಳಗೆ ಗ್ರೌಂಡ್‌ಗ್ಲಾಸ್ ಬದಲು ಗ್ಲಾಸ್‌ಗೆ ಪಾಲಿಸ್ಟರ್ ಸನ್‌ಕಂಟ್ರೋಲ್ ಫಿಲ್ಮ್‌ಶೀಟ್ ಅಳವಡಿಸಬಹುದು.[೮]

ಹೀಗೆ ವಸ್ತುಗಳ ಸಂರಕ್ಷಣೆ ಮತ್ತು ವಸ್ತುಸಂಗ್ರಹಾಲಯಗಳ ನಿರ್ವಹಣೆಯನ್ನು ಮಾಡಬಹುದು.

## ಟಿಪ್ಪಣಿಗಳು

೧. ಯು. ಎಸ್. ರಾಮಣ್ಣ, ೨೦೦೪, **ಜಾನಪದ ವಸ್ತುಸಂಗ್ರಹಾಲಯ**, ಸ್ನೇಹಾ ಪ್ರಿಂಟರ್ಸ್, ಪ್ರಸಾರಾಂಗ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ, ಪು. ೧.

೨. ಡಾ. ಚಕ್ಕರೆ ಶಿವಶಂಕರ್, ಜುಲೈ-ಡಿಸೆಂಬರ್, ೧೯೯೭, **ಜಾನಪದ ಜಗತ್ತು**, ಸಂಪುಟ-೧೮, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೧.

೩. ಪ್ರೊ. ಡಿ. ಲಿಂಗಯ್ಯ, ಕೆ.ಆರ್. ಸಂಧ್ಯಾರೆಡ್ಡಿ, ೨೦೦೬, **ಜಾನಪದ ಸ್ವರೂಪ ಮತ್ತು ಸಾಹಿತ್ಯ**, ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್ ಪ್ರಿಂಟರ್ಸ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೨೧.

೪. ಅದೇ....., ಪು. ೧೨೨.

೫. ಅದೇ....., ಪು. ೧೨೩.

೬. ಬಿಂದುರಾಣಿ ಎಸ್.ಕೆ., ೨೦೦೮, **ಜಾನಪದ ಲೋಕ : ಒಂದು ಅಧ್ಯಯನ**, ಜಾನಪದ ಡಿಪ್ಲೊಮಾ ತರಗತಿ ವರದಿ, ಜಾನಪದ ಲೋಕ, ಪು. ೩.

೭. ವಿ.ಎನ್. ಶಿವರಾಮು, ಮಾರ್ಚ್-ಏಪ್ರಿಲ್, ೧೯೮೭, **ಜಾನಪದ ಜಗತ್ತು**, ಜಾನಪದ ಲೋಕ ವಿಶೇಷ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩೮.

೮. ಅದೇ....., ಪು. ೪೨.

೯. ಮೋಹನ್ ಎಸ್., ೨೦೦೮, **ಜಾನಪದ ಲೋಕ ಕಿರುಪರಿಚಯ**, ತರಗತಿ ಭೋದನೆ, ಜಾನಪದ ಲೋಕ, ಪು. ೨.

೧೦. ಎಚ್.ಎಲ್. ನಾಗೇಗೌಡ, ೨೦೦೩, **ಜಾನಪದ ಲೋಕ ವರದಿ ಪತ್ರಿಕೆ**, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩.

೧೧. ಎಚ್.ಎಲ್. ನಾಗೇಗೌಡ, ಜುಲೈ-ಡಿಸೆಂಬರ್, ೧೯೯೭, **ಜಾನಪದ ಜಗತ್ತು**, ಸಂಯುಕ್ತ ಸಂಚಿಕೆ, ಸಂಪುಟ-೧೮, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೧.

೧೨. ಪ್ರೊ. ಡಿ. ಲಿಂಗಯ್ಯ, ಜನವರಿ-ಡಿಸೆಂಬರ್, ೨೦೦೬, **ಜಾನಪದ ಜಗತ್ತು**, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೪೦.

• • •

ಅಧ್ಯಾಯ ೪

# ಜಾನಪದ ಲೋಕ : ಶೈಕ್ಷಣಿಕ ಕಾರ್ಯಕ್ರಮಗಳು

ಅಧ್ಯಾಯ ೪

# ಜಾನಪದ ಲೋಕ : ಶೈಕ್ಷಣಿಕ ಕಾರ್ಯಕ್ರಮಗಳು

## ಅಧ್ಯಾಯ ೪

# ಜಾನಪದ ಲೋಕ : ಶೈಕ್ಷಣಿಕ ಕಾರ್ಯಕ್ರಮಗಳು

**ಈ** ಅಧ್ಯಯನವು ಜಾನಪದ ಲೋಕದ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಸಂಬಂಧಿಸಿದ್ದು, ಈ ಅಧ್ಯಾಯದಲ್ಲಿ ಶೈಕ್ಷಣಿಕ ವಿಚಾರಗಳನ್ನು ಕುರಿತು ಚರ್ಚಿಸಲಾಗಿದೆ. ಮೊದಲಿಗೆ ಜಾನಪದ ಮಹಾವಿದ್ಯಾಲಯದ ಬಗ್ಗೆ ತಿಳಿಸುತ್ತಾ ಅದು ಯಾವಾಗ ಆರಂಭವಾಯಿತು, ಅದು ಯಾವ ರೀತಿಯ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ಕಲಿಸುತ್ತಿದೆ ಎಂಬುದನ್ನು ತಿಳಿಸಲಾಗಿದೆ. ಜನಪದ ಶಿಕ್ಷಣದ ಜೊತೆಗೆ ವಿದ್ಯಾರ್ಥಿಗಳಿಗೆ ಯಾವ ಜನಪದ ಕಲೆಗಳನ್ನು ಕಲಿಸಿ ತರಬೇತಿ ನೀಡಲಾಗುತ್ತಿದೆ ಎಂಬುದನ್ನು ಹೇಳಲಾಗಿದೆ ಹಾಗೂ ಕಲಾ ಕೇಂದ್ರವಾಗಿ ಜಾನಪದ ಲೋಕ ಹೇಗೆ ಕಾರ್ಯನಿರ್ವಹಿಸುತ್ತಿದೆ ಎಂಬುದನ್ನು ಹೇಳುತ್ತಾ ಕಲಾ ಕೇಂದ್ರದಲ್ಲಿ ಬರುವ ವಿವಿಧ ಜನಪದ ಕಲೆಗಳು ಯಾವುವು? ಆ ಕಲೆಗಳು ಹೇಗೆ ಪ್ರದರ್ಶನ ನೀಡುತ್ತಿವೆ ಎಂಬುದನ್ನು ತಿಳಿಸಲಾಗಿದೆ.

ಜಾನಪದ ಸಂಶೋಧನಾ ಕೇಂದ್ರವಾಗಿ ಜಾನಪದ ಲೋಕ ಹೇಗೆ ಸಂಶೋಧನಾ ಕೆಲಸದಲ್ಲಿ ನಿರತವಾಗಿದೆ ಎಂಬುದನ್ನು ತಿಳಿಸಲಾಗಿದೆ ಹಾಗೂ ಕಮ್ಮಟಗಳು ಹೇಗೆ ನಡೆಯುತ್ತವೆ ಎಂಬುದನ್ನು ಚರ್ಚಿಸಲಾಗಿದೆ. ಈ ಕಮ್ಮಟದಲ್ಲಿ ಯಾವ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ, ಅದರಿಂದ ಯಾವ ಪ್ರಯೋಜನವಾಗುತ್ತಿದೆ ಎಂಬುದನ್ನು ತಿಳಿಸಲಾಗಿದೆ. ಜೊತೆಗೆ ಯಾವ ಯಾವ ರೀತಿಯ ತರಬೇತಿಯ ಶಿಬಿರಗಳು ಇಲ್ಲಿ ನಡೆಯುತ್ತವೆ ಎಂಬುದನ್ನು ಹೇಳಲಾಗಿದೆ ಮತ್ತು ವಿಚಾರ ಸಂಕಿರಣಗಳು ಈ ಕೇಂದ್ರದಲ್ಲಿ ಹೇಗೆ ನಡೆಯುತ್ತಿವೆ, ಇದರಿಂದ ಎಷ್ಟು ಪ್ರಯೋಜನವಾಗುತ್ತಿದೆ ಹಾಗೂ ಈ ಶಿಬಿರಕ್ಕೆ ಬರುವ ಜಾನಪದ ವಿದ್ವಾಂಸರಿಂದ ಜನಪದ ಆಸಕ್ತರಿಗೆ ಯಾವ ರೀತಿ ಪ್ರಯೋಜನವಾಗುತ್ತಿದೆ ಎಂಬುದನ್ನು ಹೇಳಲಾಗಿದೆ.

### ೪.೧. ಜಾನಪದ ಮಹಾವಿದ್ಯಾಲಯ

ಜಾನಪದ ಲೋಕದ ವಿಶಿಷ್ಟ ಅಂಶಗಳಲ್ಲಿ ಜಾನಪದ ಮಹಾವಿದ್ಯಾಲಯದ ಪಾತ್ರ ಅಮೋಘ ವಾದದ್ದು. ಜಾನಪದ ಶಿಕ್ಷಣವನ್ನು ಉಳಿಸಿ ಬೆಳೆಸಲು ಈ ಕೇಂದ್ರವು ತನ್ನದೇ ಆದ ಕೊಡುಗೆಯನ್ನು ನೀಡುತ್ತಿದೆ.[೧] ಬೆಂಗಳೂರು ವಿಶ್ವವಿದ್ಯಾಲಯದ ಸಂಯೋಜನೆಯ ಮಂಜುರಾತಿಯೊಂದಿಗೆ ೧೯೯೪ರಲ್ಲಿ ಜಾನಪದ ಲೋಕದಲ್ಲಿ ಜಾನಪದ ಮಹಾವಿದ್ಯಾಲಯವನ್ನು ಪ್ರಾರಂಭಿಸಲಾಗಿರುತ್ತದೆ. ಈ

ಮಹಾವಿದ್ಯಾಲಯದಲ್ಲಿ ಎಸ್.ಎಸ್.ಎಲ್.ಸಿ. ಪಾಸಾದ ವಿದ್ಯಾರ್ಥಿಗಳು ಜಾನಪದ ಸರ್ಟಿಫಿಕೇಟ್ ತರಗತಿಗಳಿಗೆ ಸೇರಲು ಅವಕಾಶವನ್ನು ಕಲ್ಪಿಸಲಾಗಿದೆ ಹಾಗೂ ಪಿ.ಯು.ಸಿ. ಪಾಸಾದ ವಿದ್ಯಾರ್ದಿಗಳು ಜಾನಪದ ಡಿಪ್ಲೊಮಾ ತರಗತಿಗಳಿಗೆ ಸೇರಲು ಜಾನಪದ ಮಹಾವಿದ್ಯಾಲಯದಲ್ಲಿ ಮುಕ್ತ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ.

ಈ ಮಹಾವಿದ್ಯಾಲಯದಲ್ಲಿ ವಿದ್ಯಾರ್ಥಿಗಳಿಗೆ ಜಾನಪದ, ಜಾನಪದ ಎಂದರೇನು? ಜಾನಪದ ಬೆಳೆದು ಬಂದ ಬಗೆ, ಜಾನಪದದ ಆಧುನಿಕ ಪರಿಕಲ್ಪನೆ, ಜಾನಪದದ ಲಕ್ಷಣಗಳು, ಜಾನಪದ ಸಂಪ್ರದಾಯ, ಜಾನಪದ ಮತ್ತು ಇತರ ಶಾಸ್ತ್ರಗಳ ನಡುವಿನ ಸಂಬಂಧ, ಜನಪದ ಗೀತೆಗಳು, ಜನಪದ ಸಂಗೀತ, ಜನಪದ ಸಾಹಿತ್ಯ, ಜನಪದ ಕಥೆಗಳು, ಜನಪದ ರಂಗಭೂಮಿ ಕಲೆಗಳು, ಜಾನಪದ ವಸ್ತುಸಂಗ್ರಹಾಲಯ ಮತ್ತು ಸಂಘ-ಸಂಸ್ಥೆಗಳು, ಜಾನಪದದ ಮುಂದಿನ ಗೊತ್ತು-ಗುರಿಗಳು, ಜನಪದ ನೆಲ ಮತ್ತು ನೆಲೆ, ಜಾನಪದ ಅಭಿವೃದ್ಧಿ, ಜನಪದ ಕಲೆಗಳ ಸಂರಕ್ಷಣೆ ಸಂಘಟನೆ ಮತ್ತು ಅಭಿವೃದ್ಧಿ, ಜನಪದ ಕ್ರೀಡೆಗಳು, ಹೀಗೆ ಇನ್ನೂ ಹಲವಾರು ಜಾನಪದ ವಿಚಾರಗಳನ್ನು ಜಾನಪದ ವಿದ್ಯಾರ್ಥಿಗಳಿಗೆ ಬೋಧಿಸಲಾಗುತ್ತಿದೆ.

ಜಾನಪದ ಶಿಕ್ಷಣವನ್ನು ಕಲಿಸುವುದರ ಜೊತೆಗೆ ವಿದ್ಯಾರ್ಥಿಗಳಿಗೆ ವಿವಿಧ ಜನಪದ ಕಲೆಗಳಲ್ಲಿ ತರಬೇತಿ ನೀಡಲಾಗುವುದು. ಆ ಕಲೆಗಳೆಂದರೆ ಪಟ್ಟದ ಕುಣಿತ, ಪೂಜಾ ಕುಣಿತ, ಡೊಳ್ಳಿನ ಕುಣಿತ, ಸುಗ್ಗಿ ಕುಣಿತ, ತಮಟೆ ಬಾರಿಸುವುದು, ರಂಗದ ಕುಣಿತ, ಗೊರವರ ಕುಣಿತ, ವೀರಗಾಸೆ, ಕೋಲಾಟ, ಬೀಸು ಕಂಸಾಳೆ, ನಂಧೀಧ್ವಜ ಹೀಗೆ ಇನ್ನೂ ಹಲವಾರು ಜನಪದ ಕಲೆಗಳಲ್ಲಿ ತರಬೇತಿಯನ್ನು ನೀಡಲಾಗುವುದು.[೨] ಇದರಿಂದ ವಿದ್ಯಾರ್ಥಿಗಳು ಜಾನಪದ ಶಿಕ್ಷಣವನ್ನು ಪಡೆಯುವುದರ ಮುಖಾಂತರ ಜಾನಪದ ಕಲೆಗಳನ್ನು ಉಳಿಸಿ, ಬೆಳೆಸಿ, ಸಂರಕ್ಷಿಸಿ, ಆಚರಿಸಿ, ಪ್ರದರ್ಶಿಸಲು ತಮ್ಮದೇ ಆದ ಕೊಡುಗೆಯನ್ನು ನೀಡುತ್ತಿದ್ದಾರೆ.

ಈ ಮಹಾವಿದ್ಯಾಲಯದಲ್ಲಿ ಜಾನಪದ ವಿದ್ಯಾರ್ಥಿಗಳಿಗೆ ಜಾನಪದ ಶಿಕ್ಷಣವನ್ನು ಬೋಧಿಸಲು ನಾಡಿನ ನಾನಾ ಭಾಗಗಳಿಂದ ಜಾನಪದ ವಿದ್ವಾಂಸರನ್ನು ಕರೆಯಿಸಿ ಬೋಧಿಸಲಾಗುತ್ತದೆ. ಈ ಮಹಾವಿದ್ಯಾಲಯ ಆರಂಭವಾದಂದಿನಿಂದಲೂ ಇಲ್ಲಿಯವರೆಗೆ ಸುಮಾರು ೬೦೦-೭೦೦ ವಿದ್ಯಾರ್ಥಿಗಳು ಜಾನಪದ ಡಿಪ್ಲೊಮಾ ಕೋರ್ಸ್‌ನ್ನು ಮುಗಿಸಿದ್ದಾರೆ. ಕಳೆದ ವರ್ಷ ೬೨ ಮಂದಿ ವಿದ್ಯಾರ್ಥಿಗಳು ಈ ಮಹಾವಿದ್ಯಾಲಯದಲ್ಲಿ ಕಲಿತು ತರಬೇತಿ ಹೊಂದಿದ್ದರೆ, ಈ ಸಾಲಿನಲ್ಲಿ ೩೮ ಮಂದಿ ವಿದ್ಯಾರ್ಥಿಗಳು ತರಬೇತಿಯನ್ನು ಪಡೆಯುತ್ತಿದ್ದಾರೆ. ಹೀಗೆ ಈ ಮಹಾವಿದ್ಯಾಲಯವು ತನ್ನದೇ ಆದ ಗಾತ್ರ, ಪಾತ್ರ, ಸೂತ್ರಗಳನ್ನು ವಿಸ್ತರಿಸಿಕೊಂಡು ಬೆಳೆಯುತ್ತಿದೆ.

### ೪.೨. ಜನಪದ ಕಲಾ ಕೇಂದ್ರ

ಜಾನಪದ ಲೋಕದ ವಿಶಿಷ್ಟ ಅಂಶಗಳಲ್ಲಿ ಜನಪದ ಕಲಾ ಕೇಂದ್ರ ಪ್ರಮುಖವಾದದ್ದು. ಈ ಕಲಾ ಕೇಂದ್ರದ ಪ್ರಮುಖ ಉದ್ದೇಶವೆಂದರೆ ವಿವಿಧ ರೀತಿಯ ಜನಪದ ಕಲೆಗಳ ಬಗ್ಗೆ ತರಬೇತಿ ನೀಡುವುದು

ಹಾಗೂ ತರಬೇತಿ ಪಡೆದ ಕಲಾ ತಂಡಗಳನ್ನು ರಾಜ್ಯದ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪ್ರದರ್ಶನ ನೀಡಲು ಕಳುಹಿಸುವುದಾಗಿದೆ.[೩] ಆ ಕಲಾ ಪ್ರದರ್ಶನಗಳೆಂದರೆ ಪಟ್ಟದ ಕುಣಿತ, ರಂಗದ ಕುಣಿತ, ಪೂಜಾ ಕುಣಿತ, ಸುಗ್ಗಿ ಕುಣಿತ, ಗಾರುಡಿ ಕುಣಿತ, ಕೋಲಾಟ, ಪಂಜಿನ ಕುಣಿತ, ಸೋಮನ ಕುಣಿತ, ಹರಿಗೆ ಕುಣಿತ, ಒನಕೆ ಕುಣಿತ, ಕಂಬದ ಕುಣಿತ, ಕರಗದ ಕುಣಿತ, ವೀರಭದ್ರನ ಕುಣಿತ, ವೀರ ಮಕ್ಕಳ ಕುಣಿತ, ಗುಡ್ಡರ ಕುಣಿತ, ಬೀಸುಕಂಸಾಳೆ ಕುಣಿತ, ಗೊರವರ ಕುಣಿತ, ಡೊಳ್ಳು ಕುಣಿತ, ಕೀಲು ಕುದುರೆ ಕುಣಿತ, ಹಲಗೆ ಮೇಳ, ಹುಲಿವೇಷ, ಹಾಲಕ್ಕಿ ಸುಗ್ಗಿ ಕುಣಿತ, ಮರಗಾಲು ಮನುಷ್ಯರ ಕುಣಿತ, ಕೊಡವರ ಕುಣಿತ, ಲಂಬಾಣಿ ನೃತ್ಯ, ಪುರವಂತಿಕೆ ಕುಣಿತ, ಹೆಜ್ಜೆ ಮೇಳ, ಇನ್ನೂ ಮುಂತಾದವು.

ಕರ್ನಾಟಕದ ಎಲ್ಲಾ ಜನಪದ ಕಲೆಗಳನ್ನು ಇಲ್ಲಿ ಕಾಣಬಹುದು. ಏಕೆಂದರೆ ಆ ಕಲೆಗಳಲ್ಲಿ ತರಬೇತಿ ಪಡೆಯಲು ಹಾಗೂ ಪ್ರದರ್ಶನ ನೀಡಲು ರಾಜ್ಯದ ನಾನಾ ಭಾಗಗಳಿಂದ ಕಲಾವಿದರು ಇಲ್ಲಿಗೆ ಬರುತ್ತಾರೆ. ಇಲ್ಲಿ ಒಂದೊಂದೇ ತಂಡಗಳನ್ನು ರಚಿಸಿ ತರಬೇತಿ ನೀಡಿ ಪ್ರದರ್ಶನ ನೀಡಲು ಕಳುಹಿಸಿ ಕೊಡಲಾಗುವುದು. ಜನಪದ ಕಲೆಯನ್ನು ಉಳಿಸಿ, ಬೆಳೆಸಿ ಪ್ರದರ್ಶಿಸುವುದು ಈ ಕೇಂದ್ರದ ಬಹುಮುಖ್ಯ ಉದ್ದೇಶವಾಗಿರುತ್ತದೆ.

ಈ ಕಲಾ ಕೇಂದ್ರದಲ್ಲಿ ವಿಶೇಷವಾಗಿ ಜನಪದ ಆಸಕ್ತರು, ಯುವಕ-ಯುವತಿಯರು ಹಾಗೂ ವಿದ್ಯಾರ್ಥಿಗಳು ಹೆಚ್ಚಾಗಿ ತರಬೇತಿಯನ್ನು ಹೊಂದುತ್ತಿದ್ದಾರೆ. ಇದರಿಂದ ಯುವ ಪೀಳಿಗೆಯ ಮುಖಾಂತರ ಜನಪದ ಕಲೆಗಳನ್ನು ಉಳಿಸಿ ಬೆಳೆಸುವ ಕಾರ್ಯವನ್ನು ಇಂದು ಜಾನಪದ ಲೋಕವು ಮಾಡುತ್ತಿದೆ.

ಈ ಕಲಾ ಕೇಂದ್ರದ ಮತ್ತೊಂದು ವಿಶೇಷವೆಂದರೆ ವೀಡಿಯೋ ಚಿತ್ರೀಕರಣ ಪ್ರದರ್ಶನವಾಗಿದೆ. ಇಲ್ಲಿ ಕರ್ನಾಟಕದಲ್ಲಿ ಪುರಾತನ ಕಾಲದಿಂದಲೂ ಆಚರಿಸಿಕೊಂಡು ಬಂದ ಜನಪದ ಕಲೆಗಳ ಸಾಕ್ಷ್ಯ ಚಿತ್ರಗಳನ್ನು ಸಂಗ್ರಹಿಸಲಾಗಿದೆ. ಇದರಿಂದ ನಮ್ಮ ಹಿಂದಿನ ಕಾಲದಿಂದ ಇಡಿದು ಇಂದಿನವರೆಗೂ ಯಾವ್ಯಾವ ಜನಪದ ಕಲೆಗಳು, ಯಾವ್ಯಾವ ಭಾಗಗಳಲ್ಲಿ ಯಾವ ರೀತಿಯಲ್ಲಿ ಇದೆ ಎಂಬುದನ್ನು ಇದರ ಮುಖಾಂತರ ತಿಳಿಯಬಹುದು. ಈ ಕೆಲಸವನ್ನು ಮಾಡುವಲ್ಲಿ ನಾಗೇಗೌಡರು ಕರ್ನಾಟಕ ನಾನಾ ಭಾಗಗಳಲ್ಲಿ ಸುತ್ತಾಡಿ ಜನಪದ ಕಲೆಗಳು ಮತ್ತು ಕಲಾವಿದರನ್ನು ಸಂಪರ್ಕಿಸಿ ಮಾಹಿತಿ ಸಂಗ್ರಹಿಸಿದ್ದಾರೆ.

ಜಾನಪದ ಲೋಕದಲ್ಲಿ ಪ್ರತಿ ವರ್ಷ ನಡೆಸುವ ದಸರಾ ಉತ್ಸವ, ಲೋಕೋತ್ಸವ, ಗಾಳಿಪಟ ಉತ್ಸವ ಕಾರ್ಯಕ್ರಮಗಳಲ್ಲಿ ಕರ್ನಾಟಕ ಎಲ್ಲಾ ಭಾಗಗಳಿಂದಲೂ ಜನಪದ ಕಲಾವಿದರನ್ನು ಕರೆಯಿಸಿ ಪ್ರದರ್ಶನ ನೀಡಲಾಗುತ್ತದೆ. ಇದರಿಂದ ರಾಜ್ಯದ ಎಲ್ಲಾ ಭಾಗದ ಜನಪದ ಕಲೆಗಳನ್ನು ಇಲ್ಲಿ ನೋಡಬಹುದು. ಹೀಗೆ ಈ ಜನಪದ ಕಲಾ ಕೇಂದ್ರವು ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಬೆಳೆಯುತ್ತಿದೆ.[೪]

### ೪.೩. ಜಾನಪದ ಸಂಶೋಧನಾ ಕೇಂದ್ರ

ಬೆಂಗಳೂರು ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಜಾನಪದ ಸಂಶೋಧನಾ ಕೇಂದ್ರವನ್ನು ಜಾನಪದ ಲೋಕದಲ್ಲಿ ತೆರೆಯಲಾಗಿದೆ. ಜಾನಪದ ಕ್ಷೇತ್ರದಲ್ಲಿ ಎಂ.ಎ., ಎಂ.ಫಿಲ್., ಪಿಎಚ್.ಡಿ. ಪದವಿಗಾಗಿ

ಸಂಶೋಧನೆ ನಡೆಸುತ್ತಿರುವ ಪದವೀಧರರು ಈ ಸಂಶೋಧನಾ ಕೇಂದ್ರದಲ್ಲಿ ಹೆಸರು ನೋಂದಾವಣಿ ಮಾಡಿಸಿಕೊಂಡಿದ್ದಾರೆ. ಇದುವರೆಗೆ ಸುಮಾರು ಹತ್ತು ಮಂದಿ ಸಂಶೋಧಕರು ಇಲ್ಲಿ ನೋಂದಾವಣಿ ಮಾಡಿಸಿದ್ದಾರೆ. ಕರ್ನಾಟಕ ಜಾನಪದದ ಬಗ್ಗೆ ಅಧ್ಯಯನ, ಸಂಶೋಧನೆ ಮತ್ತು ಮಾಹಿತಿ ಕೋರಿ ಬರುವವರಿಗೆ ಈ ಸಂಶೋಧನಾ ಕೇಂದ್ರವು ನೆರವು ನೀಡುತ್ತಿದೆ." ಹಲವಾರು ಕಮ್ಮಟಗಳು, ವಿಚಾರ ಸಂಕಿರಣಗಳು, ತರಬೇತಿ ಶಿಬಿರಗಳು, ರೂಪಕ ರಚನಾ ಶಿಬಿರಗಳು ಹಾಗೂ ಉದಯೋನ್ಮುಖ ಗಾಯಕರಿಗೆ ಜನಪದ ಗೀತೆಗಳನ್ನು ಮೂಲಧಾಟಿಯಲ್ಲಿ ಹಾಡಲು ಕಲಿಸುವ ಜನಪದ ಸಂಗೀತ ಕಲಿಕೆ ಶಿಬಿರಗಳನ್ನು ನಡೆಸುತ್ತಾ ಬಂದಿದೆ. ವಿದ್ವಾಂಸರನ್ನು ಮತ್ತು ಆಸಕ್ತರನ್ನು ಒಂದೆಡೆ ಸೇರಿಸಿ ಜಾನಪದದ ವಿವಿಧ ಆಯಾಮಗಳ ಅರಿವು ಮೂಡಿಸುವಲ್ಲಿ ಸಂಶೋಧನಾ ಕೇಂದ್ರವು ಮಹತ್ವದ ಕಾರ್ಯನಿರ್ವಹಿಸುತ್ತಿದೆ. ಜೊತೆಗೆ ಜಾನಪದಕ್ಕೆ ಮೀಸಲಾದ ಬೃಹತ್ ಗ್ರಂಥ ಭಂಡಾರವೂ ಇಲ್ಲಿದೆ. ಈ ಗ್ರಂಥಾಲಯದಲ್ಲಿ ಸುಮಾರು ೫೦೦೦ಕ್ಕೂ ಹೆಚ್ಚು ಪುಸ್ತಕಗಳಿವೆ. ಅವುಗಳನ್ನು ಈ ಸಂಶೋಧನಾ ಕೇಂದ್ರದಲ್ಲಿ ನೋಂದಾವಣಿ ಮಾಡಿಸಿದ ಸಂಶೋಧಕರಿಗೆ ಕೊಡಲಾಗುವುದು. ಇದರಿಂದ ಅವರು ಸಂಶೋಧನೆ ಕಾರ್ಯವನ್ನು ಮಾಡಲು ಅಭ್ಯಸಿಸಲು ಈ ಸಂಶೋಧನಾ ಕೇಂದ್ರವು ಸಹಾಯವಾಗಿದೆ.

### ೪.೪. ಕಮ್ಮಟಗಳು

ಜಾನಪದ ಲೋಕದ ವಿಶಿಷ್ಟ ಅಂಶಗಳಲ್ಲಿ ಹಾಗೂ ಶೈಕ್ಷಣಿಕ ಚಟುವಟಿಕೆಗಳಲ್ಲಿ ಕಮ್ಮಟಗಳು ಪ್ರಮುಖ ಪಾತ್ರ ವಹಿಸುತ್ತವೆ. ಜನಪದ ಗೀತೆಗಳು, ಜನಪದ ಶಿಕ್ಷಣ, ಜನಪದ ಕಲೆ, ಜನಪದ ವಸ್ತುಗಳು, ಜನಪದ ಸಾಹಿತ್ಯ, ಜಾನಪದ ಸಂಘ-ಸಂಸ್ಥೆಗಳು ಮತ್ತು ಅವುಗಳ ಚಟುವಟಿಕೆಗಳು, ಜಾನಪದ ಅಭಿವೃದ್ಧಿ, ಜನಪದ ಕಲೆಗಳ ಸಂರಕ್ಷಣೆ ಮತ್ತು ಅಭಿವೃದ್ಧಿ, ಜನಪದ ಜೀವನ, ಜನಪದ ಕಲೆಗಳನ್ನು ಸಾಕ್ಷ್ಯಚಿತ್ರಗಳ ಮೂಲಕ ತಿಳಿಸುವ ಅಂಶಗಳು ಹೇಗೆ ಜಾನಪದೀಯ ಅಂಶಗಳನ್ನು ಕುರಿತು ಚರ್ಚಿಸುವುದು ಕಮ್ಮಟದ ಬಹುಮುಖ್ಯ ಉದ್ದೇಶವಾಗಿದೆ.

ಇದರಿಂದ ಇಂತಹ ಜನಪದೀಯ ಚಟುವಟಿಕೆಗಳನ್ನು ಸಮಾಜಕ್ಕೆ, ಜನರಿಗೆ ತಿಳಿಸುವುದರ ಮುಖಾಂತರ ಜಾನಪದ ಪರಂಪರೆಯನ್ನು ಉಳಿಸಿ, ಬೆಳೆಸಿ ಸಂರಕ್ಷಿಸುವ ಕಾರ್ಯವನ್ನು ಮಾಡಿದಂತಾಗುತ್ತದೆ. ಇಂತಹ ಕಮ್ಮಟಗಳು ಅಂತಾರಾಷ್ಟ್ರೀಯ ಮಟ್ಟದಲ್ಲಿ, ರಾಷ್ಟ್ರ ಮಟ್ಟದಲ್ಲಿ ಹಾಗೂ ಸ್ಥಳೀಯ ಮಟ್ಟದಲ್ಲಿ ಹೆಚ್ಚು ಹೆಚ್ಚಾಗಿ ಜರುಗಬೇಕು. ಇಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಂಡಾಗ ರಾಷ್ಟ್ರಕ್ಕೆ ಮತ್ತು ಜನರಿಗೆ ಜಾನಪದ ಪರಂಪರೆಯ ಜಾಗೃತಿಯನ್ನು ಮೂಡಿಸಿದಂತಾಗುತ್ತದೆ.

ಕಮ್ಮಟಗಳನ್ನು ಜಾನಪದ ಆಚರಣೆಗಳನ್ನು ತಿಳಿಸುವ ಕೈಗನ್ನಡಿಗಳು ಎನ್ನಬಹುದು. ಇದರಿಂದ ಜಾನಪದ ವಿಚಾರಗಳನ್ನು ಹೇಳುವವರಿಂದ ಹಾಗೂ ಕೇಳುವವರಿಂದ ಪರಸ್ಪರ ಚರ್ಚೆಗಳ ಮುಖಾಂತರ ಉತ್ತಮವಾದ ಮಾಹಿತಿಯನ್ನು ಪಡೆಯಲು ಸಹಾಯವಾಗುತ್ತದೆ. ಇಂತಹ ಕೆಲಸಗಳನ್ನು ಮಾಡುವಲ್ಲಿ ಜಾನಪದ ಲೋಕವು ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ.

ಜಾನಪದ ಲೋಕದಲ್ಲಿ ನಡೆಯುವ ಕಮ್ಮಟಗಳಲ್ಲಿ ಮುಖ್ಯವಾದವುಗಳನ್ನು ಈ ಕೆಳಗಿನಂತೆ ತಿಳಿಸಲಾಗಿದೆ.

**ಲಿಪ್ಯಂತರ ಕಮ್ಮಟ**

ಜಾನಪದ ಪರಂಪರೆಯನ್ನು ಸಮಾಜಕ್ಕೆ ತಿಳಿಸುವಲ್ಲಿ ಲಿಪ್ಯಂತರ ಕಮ್ಮಟ ಪ್ರಮುಖ ಪಾತ್ರ ವಹಿಸುತ್ತದೆ. ಜಾನಪದೀಯ ಅಂಶಗಳಿಗೆ ಸಂಬಂಧಿಸಿದಂತೆ ನಾಡಿನಾದ್ಯಂತ ಧ್ವನಿ ಮುದ್ರಿಸಿಕೊಂಡಿರುವ ಜಾನಪದ ಕ್ಯಾಸೆಟ್‌ಗಳನ್ನು ಕೇಳಿ ಬರೆದುಕೊಂಡು ಪುಸ್ತಕ ರೂಪದಲ್ಲಿ ತರುವುದು ಲಿಪ್ಯಂತರ ಕಮ್ಮಟದ ಉದ್ದೇಶವಾಗಿದೆ.[೬] ಇಂತಹ ಒಂದು ಬಹುದೊಡ್ಡ ಕೆಲಸವನ್ನು ಡಾ. ಎಚ್.ಎಲ್. ನಾಗೇಗೌಡರು ಮಾಡಿದ್ದಾರೆ. ಅವರು ಸುಮಾರು ೩೦ ವರ್ಷಗಳ ಹಿಂದಿನ ಕಾಲದ ಹಾಡು, ಕಲೆಗಳನ್ನು ಕ್ಯಾಸೆಟ್‌ಗಳ ಮೂಲಕ ಸಂಗ್ರಹಿಸಿದ್ದಾರೆ.

ಇಂತಹ ಕ್ಯಾಸೆಟ್‌ಗಳನ್ನು ನಾಗೇಗೌಡರು ಕರ್ನಾಟಕ ಬಹುಪಾಲು ಕಡೆ ಸುತ್ತಾಡಿ ಜಾನಪದ ಹಾಡುಗಳು, ಜನಪದ ಕಲೆಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ಮಾಡಿರುವ ಸಾಧನೆಯನ್ನು ಹೇಳತೀರದು. ಪ್ರಸ್ತುತವಾಗಿಯೂ ಅವರು ಸಂಗ್ರಹಿಸಿರುವ ಕ್ಯಾಸೆಟ್‌ಗಳನ್ನು ಪ್ರತಿ ವರ್ಷ ಆಚರಿಸುವ ಲಿಪ್ಯಂತರ ಕಮ್ಮಟದ ಕಾರ್ಯಕ್ರಮದಲ್ಲಿ ಜಾನಪದ ಡಿಪ್ಲೊಮಾ, ಕನ್ನಡ ಸ್ನಾತಕೋತ್ತರ ಪದವೀಧರರು ಹಾಗೂ ಸಂಶೋಧನಾ ವಿದ್ಯಾರ್ಥಿಗಳ ಮೂಲಕ ಜಾನಪದ ಹಾಡು, ಕಲೆಗಳಿಗೆ ಸಂಬಂಧಿಸಿದ ಕ್ಯಾಸೆಟ್‌ಗಳನ್ನು ಇವರುಗಳ ಮೂಲಕ ಕೇಳಿ ಬರೆಸುವ ಹಾಗೂ ಬರೆದುದ್ದನ್ನು ಪುಸ್ತಕ ರೂಪದಲ್ಲಿ ತಿಳಿಸುವ ಕಾರ್ಯವನ್ನು ಇಂದು ಜಾನಪದ ಲೋಕವು ಮಾಡುತ್ತಿದೆ.

**ಜಾನಪದ ರಾಯಭಾರಿ ಕಮ್ಮಟ**

ಜಾನಪದೀಯ ಅಂಶಗಳನ್ನು ತಿಳಿಸುವಲ್ಲಿ ರಾಯಭಾರಿ ಕಮ್ಮಟದ ಪಾತ್ರ ಅಮೋಘವಾದುದ್ದು. ಜಾನಪದ ಲೋಕದಲ್ಲಿ ಪ್ರತಿ ವರ್ಷ ಜಾನಪದ ರಾಯಭಾರಿ ಕಮ್ಮಟವನ್ನು ಜುಲೈ ತಿಂಗಳಲ್ಲಿ ನಡೆಸಲಾಗುತ್ತದೆ. ಕರ್ನಾಟಕದ ಬೇರೆ ಬೇರೆ ಸ್ಥಳಗಳಿಂದ ಜನಪದ ಆಸಕ್ತರನ್ನು, ಜಾನಪದ ವಿದ್ವಾಂಸರನ್ನು ಇಲ್ಲಿಗೆ ಕರೆಸಿ ಕಮ್ಮಟವನ್ನು ನಡೆಸಲಾಗುತ್ತದೆ. ಜಾನಪದ ವಸ್ತು-ವಿಚಾರಗಳನ್ನು ತಿಳಿಸುವುದು ಈ ರಾಯಭಾರಿ ಕಮ್ಮಟದ ಉದ್ದೇಶವಾಗಿರುತ್ತದೆ.[೭] ಇಲ್ಲಿ ಬಹುಮುಖ್ಯವಾಗಿ ಜನಪದ ನೆಲ-ನೆಲೆಗಳನ್ನು ಕುರಿತು ಚರ್ಚಿಸಲಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಜನಪದದ ಮೂಲ ನೆಲೆಯನ್ನು ಕುರಿತು ಚರ್ಚಿಸಲಾಗುತ್ತದೆ. ಸಮಕಾಲೀನ ಸಂದರ್ಭದಲ್ಲಿ ಇದರ ಪಾತ್ರ ಹಾಗೂ ಜಾನಪದದ ಮೇಲೆ ಜಾಗತೀಕರಣ ಪ್ರಭಾವವನ್ನು ಕುರಿತು ಚರ್ಚಿಸುವುದು, ಜನಪದ ಸಾಹಿತ್ಯವನ್ನು ಏಕೆ ಸಂಗ್ರಹಿಸಬೇಕು? ಹೇಗೆ ಸಂಗ್ರಹಿಸ ಬೇಕು ಎಂಬುದನ್ನು ಚರ್ಚಿಸುವುದು, ಕರ್ನಾಟಕದ ಜಾನಪದ ಸಂಘ-ಸಂಸ್ಥೆಗಳು ಮತ್ತು ಅವುಗಳ ಚಟುವಟಿಕೆಗಳನ್ನು ಕುರಿತು ತಿಳಿಯುವುದು, ಜಾನಪದ ಅಭಿವೃದ್ಧಿ ಹೇಗೆ? ಮತ್ತು ಜಾನಪದ ಅಭಿವೃದ್ಧಿ ಏಕೆ ಎಂಬುದನ್ನು ಚರ್ಚಿಸುವುದು ಹಾಗೂ ವಿವಿಧ ಜನಪದ ಕಲೆಗಳ ಪ್ರದರ್ಶನ ಕುರಿತು ಚರ್ಚಿಸುವುದು,

ಜನಪದ ಕಲೆಗಳ ಸಂರಕ್ಷಣೆ, ಸಂಘಟನೆ ಮತ್ತು ಅಭಿವೃದ್ಧಿ ಕುರಿತು ತಿಳಿಯುವುದು ಮತ್ತು ಜನಪದ ಜೀವನ ಹಿಂದೆ-ಇಂದು-ಮುಂದೆ ಎಂಬುದರ ಬಗ್ಗೆ ಚರ್ಚಿಸುವುದು ಹಾಗೂ ವೀಡಿಯೋ ಸ್ಕೋಪ್ ಥಿಯೇಟರ್‌ನಲ್ಲಿ ಕರ್ನಾಟಕದ ಜನಪದ ಕಲೆಗಳ ಸಾಕ್ಷ್ಯಚಿತ್ರ ಪ್ರದರ್ಶನವನ್ನು ನೋಡುವುದು.

ಹೀಗೆ ಇನ್ನೂ ಹಲವಾರು ಜನಪದೀಯ ವಿಚಾರಗಳನ್ನು ಕುರಿತು ಚರ್ಚಿಸುವುದು ಜಾನಪದ ರಾಯಭಾರಿ ಕಮ್ಮಟದ ಬಹುಮುಖ್ಯ ಉದ್ದೇಶವಾಗಿದೆ.

**ಜಾನಪದ ಸಂಶೋಧನಾ ಕಮ್ಮಟ**

ಜಾನಪದ ವಿಚಾರಗಳನ್ನು ಬೆಳಕಿಗೆ ತರುವಲ್ಲಿ ಜಾನಪದ ಸಂಶೋಧನಾ ಕಮ್ಮಟ ಪ್ರಮುಖ ಪಾತ್ರವಹಿಸುತ್ತದೆ. ಜಾನಪದಕ್ಕೆ ಸಂಬಂಧಿಸಿದಂತೆ ಸಂಶೋಧನೆ ಮಾಡುವವರಿಗೆ, ಮಾಡುತ್ತಿರುವವರಿಗೆ ಹಾಗೂ ಮಾಡಬಯಸುವವರಿಗೆ ಈ ಕಮ್ಮಟವು ಸಂಶೋಧನೆಯನ್ನು ಹೇಗೆ ಮಾಡಬೇಕು, ಯಾವ ರೀತಿ ಕ್ರಮಗಳನ್ನು ಅನುಸರಿಸಬೇಕು, ಹೇಗೆ ಮಾಹಿತಿಯನ್ನು ಸಂಗ್ರಹಿಸಬೇಕು, ಸಂಗ್ರಹಿಸಿದ ಮಾಹಿತಿಯನ್ನು ಹೇಗೆ ತಿಳಿಸಬೇಕು - ಹೀಗೆ ಸಂಶೋಧನೆಗೆ ಸಂಬಂಧಿಸಿದಂತೆ ಹಲವಾರು ವಿಚಾರಗಳನ್ನು ಇಂತಹ ಸಂಶೋಧನಾ ಕಮ್ಮಟದ ಮುಖಾಂತರ ತಿಳಿಯಬಹುದು.

ಜಾನಪದ ವಸ್ತು ವಿಶೇಷತೆಗಳನ್ನು ಬೆಳಕಿಗೆ ತರುವಲ್ಲಿ ಜಾನಪದ ಸಂಶೋಧನಾ ಕಮ್ಮಟಗಳು ಪ್ರಮುಖ ನಿದರ್ಶನಗಳಾಗಿವೆ. ಇದರಿಂದ ನಮ್ಮ ಪುರಾತನ ಕಾಲದಿಂದಲೂ ಬಂದ ಜಾನಪದ ಪಳೆಯುಳಿಕೆಗಳನ್ನು ಸಂರಕ್ಷಿಸಲು ಇಂತಹ ಕಮ್ಮಟಗಳು ಸಹಾಯಕವಾಗುತ್ತವೆ. ಇದರಲ್ಲಿ ಜಾನಪದ ಸಂಶೋಧನಾ ವಿದ್ಯಾರ್ಥಿಗಳ ಪಾತ್ರ ಪ್ರಮುಖವಾಗಿದೆ. ಇದುವರೆಗೆ ಸುಮಾರು ನಾಲ್ಕರಿಂದ ಐದು ಸಂಶೋಧನಾ ವಿದ್ಯಾರ್ಥಿಗಳು ಈ ಕೆಲಸದಲ್ಲಿ ತೊಡಗಿರುವುದು ಕಂಡು ಬಂದಿದೆ.

**೪.೫. ತರಬೇತಿ ಶಿಬಿರಗಳು**

ಜಾನಪದ ಲೋಕದ ಶೈಕ್ಷಣಿಕ ಕಾರ್ಯಕ್ರಮಗಳಲ್ಲಿ ತರಬೇತಿ ಶಿಬಿರಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಈ ತರಬೇತಿ ಶಿಬಿರಗಳ ಮುಖಾಂತರ ಜಾನಪದ ವಸ್ತು-ವಿಚಾರಗಳನ್ನು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಲು ಸಹಾಯಕವಾಗುತ್ತದೆ. ತರಬೇತಿ ಶಿಬಿರಗಳು ಜನಪದ ಆಚಾರ-ವಿಚಾರ, ರೂಢಿ-ಸಂಪ್ರದಾಯ, ಜನಪದ ಕಲೆ, ವಸ್ತು ಶಿಕ್ಷಣ, ಸಂಗೀತ, ಸಾಹಿತ್ಯ, ಸಂಸ್ಕೃತಿ, ಜನಪದ ಹಾಡುಗಳು, ನೃತ್ಯ, ಗ್ರಾಮೀಣ ಕ್ರೀಡೆಗಳು ಮುಂತಾದವುಗಳನ್ನು ತರಬೇತಿ ಶಿಬಿರಗಳ ಮುಖಾಂತರ ಚರ್ಚಿಸಿ ಜಾನಪದ ಪರಂಪರೆಯನ್ನು ತಿಳಿಸುವುದು ಇದರ ಮುಖ್ಯ ಉದ್ದೇಶವಾಗಿದೆ.[೮]

ಜಾನಪದ ಲೋಕವು ಪ್ರಸ್ತುತವಾಗಿ ವಿವಿಧ ಬಗೆಯ ಜನಪದ ಕಲೆಗಳನ್ನು ಜನಪದ ಆಸಕ್ತರಿಗೆ ತರಬೇತಿ ನೀಡಿ ಆ ಮುಖಾಂತರ ಬೇರೆ ಬೇರೆ ಸ್ಥಳಗಳಿಗೆ ತರಬೇತಿ ಪಡೆದ ಕಲಾವಿದರನ್ನು ಪ್ರದರ್ಶನ ನೀಡಲು ಕಳುಹಿಸಿ ಕೊಡಲಾಗುತ್ತಿದೆ ಹಾಗೂ ಜನಪದ ಹಾಡು ನೃತ್ಯಗಳನ್ನು ಸಹ ಹೇಳಿ ಕೊಡಲಾಗುತ್ತದೆ.

ಜಾನಪದ ಲೋಕದಲ್ಲಿ ನಡೆಯುವ ಲೋಕೋತ್ಸವ ಕಾರ್ಯಕ್ರಮದಲ್ಲಿ ದಸರಾ ಉತ್ಸವಗಳಲ್ಲಿ ಜನಪದ ಕಲಾವಿದರನ್ನು ಹಾಗೂ ಹಾಡುಗಾರರನ್ನು ಸನ್ಮಾನಿಸಿ ಪ್ರಶಸ್ತಿ ಪುರಸ್ಕಾರಗಳನ್ನು ನೀಡಲಾಗುವುದು. ತರಬೇತಿ ಶಿಬಿರಗಳಲ್ಲಿ ಮುಖ್ಯವಾದವುಗಳೆಂದರೆ,

**ಜನಪದ ಕಲೆಗಳ ತರಬೇತಿ ಶಿಬಿರಗಳು**

ಜನಪದ ಕಲೆಯನ್ನು ಉಳಿಸಿ, ಬೆಳಸಿ, ಸಂರಕ್ಷಿಸಿ ಆಚರಿಸುವಲ್ಲಿ ಜನಪದ ಕಲೆಗಳ ತರಬೇತಿ ಶಿಬಿರಗಳು ಪ್ರಮುಖವಾದವು. ಅಳಿದು ಹೋಗುತ್ತಿರುವ ಜನಪದ ಕಲೆಗಳನ್ನು ತರಬೇತಿ ನೀಡಿ ಬೆಳೆಸುವುದು ಇದರ ಮುಖ್ಯ ಉದ್ದೇಶವಾಗಿದೆ. ಪ್ರತಿ ವರ್ಷ ಜಾನಪದ ಲೋಕದಲ್ಲಿ ಅಕ್ಟೋಬರ್ ತಿಂಗಳಲ್ಲಿ ಜನಪದ ಕಲೆಗಳ ತರಬೇತಿ ಶಿಬಿರಗಳನ್ನು ನಡೆಸಲಾಗುತ್ತದೆ. ಅಲ್ಲಿ ವಿವಿಧ ಜನಪದ ಕಲೆಗಳಿಗೆ ಸಂಬಂಧಿಸಿದಂತೆ ತರಬೇತಿ ನೀಡಲಾಗುತ್ತದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಪೂಜಾ ಕುಣಿತ, ಪಟ್ಟದ ಕುಣಿತ, ಡೊಳ್ಳು ಕುಣಿತ, ರಂಗದ ಕುಣಿತ, ಗೊರವರ ಕುಣಿತ, ವೀರಗಾಸೆ, ಕೋಲಾಟ, ಬೀಸುಕಂಸಾಳೆ, ನಂಧೀಧ್ವಜ- ಹೀಗೆ ಇನ್ನೂ ಮುಂತಾದ ಕಲೆಗಳಿಗೆ ಇಲ್ಲಿ ತರಬೇತಿ ನೀಡಲಾಗುತ್ತದೆ.[೯] ಈ ಕಲೆಗಳ ತರಬೇತಿ ಪಡೆಯಲು ರಾಜ್ಯದ ನಾನಾ ಭಾಗಗಳಿಂದ ಜನಪದ ಕಲಾವಿದರು ಬಂದಿರುತ್ತಾರೆ. ಬಂದ ಕಲಾವಿದರಿಗೆ ಊಟ, ವಸತಿ, ಸೌಕರ್ಯವನ್ನು ಅಲ್ಲಿ ವ್ಯವಸ್ಥೆ ಮಾಡುವರು. ಇಲ್ಲಿ ತರಬೇತಿ ಪಡೆದ ಕಲಾವಿದರು ರಾಜ್ಯದ ನಾನಾ ಭಾಗಗಳಲ್ಲಿ ಜನಪದ ಕಲೆಗಳ ಪ್ರದರ್ಶನವನ್ನು ನೀಡುವರು.

ಈ ಕಲೆಗಳನ್ನು ಮುಖ್ಯವಾಗಿ ಹೊಸ ಪೀಳಿಗೆಗೆ, ಯುವಕ-ಯುವತಿಯರಿಗೆ ತರಬೇತಿ ನೀಡಲಾ ಗುವುದು. ತರಬೇತಿ ಪಡೆದು ಪ್ರದರ್ಶನ ನೀಡಿದ ತಂಡಗಳಿಗೆ ಪ್ರಶಸ್ತಿ ಪ್ರೋತ್ಸಾಹಗಳನ್ನು ನೀಡಲಾಗುತ್ತದೆ.

**ಜನಪದ ಸಂಗೀತ ತರಬೇತಿ ಶಿಬಿರ**

ಜನಪದ ಹಾಡು, ನೃತ್ಯ, ಸಾಹಿತ್ಯ, ಸಂಗೀತವನ್ನು ಉಳಿಸಿ ಬೆಳೆಸುವುದು ಈ ತರಬೇತಿ ಶಿಬಿರದ ಮುಖ್ಯ ಉದ್ದೇಶವಾಗಿರುತ್ತದೆ. ಜನಪದ ಸಂಗೀತ ಆಸಕ್ತರಿಗೆ, ಸಂಗೀತ ಹಾಡುಗಳನ್ನು ಕಲಿಯುವವರಿಗೆ, ಕಲಿಸುವವರಿಗೆ, ಕಲಿಯಬಯಸುವವರಿಗೆ ಈ ಶಿಬಿರದಲ್ಲಿ ತರಬೇತಿಯನ್ನು ನೀಡಲಾಗುವುದು. ಪ್ರತಿ ವರ್ಷ ಸೆಪ್ಟೆಂಬರ್ ಕೊನೆಯಲ್ಲಿ ಜನಪದ ಸಂಗೀತ ತರಬೇತಿ ಶಿಬಿರವನ್ನು ಕರ್ನಾಟಕ ಜಾನಪದ ಪರಿಷತ್ತಿನ ಮುಖಾಂತರ ಜಾನಪದ ಲೋಕದಲ್ಲಿ ನಡೆಸಲಾಗುವುದು.[೧೦]

ಇಲ್ಲಿ ಮುಖ್ಯವಾಗಿ ಕಥನ ಕಾವ್ಯಗಳು, ಮಹಾಕಾವ್ಯಗಳು, ತತ್ವಪದಗಳು, ಬಿಡಿ ಗೀತೆಗಳು, ಸೋಬಾನೆ ಹಾಡುಗಳು, ಭಜನಾ ಗೀತೆಗಳು, ಗೀತಾ ಪ್ರಕಾರ, ಚೌಡಿಕೆ ಪದಗಳು, ಕಂಸಾಳೆ ಹಾಡುಗಳು, ದೇವರ ಪದಗಳು, ಬೀಸೋಕಲ್ಲಿನ ಪದಗಳು, ಇನ್ನೂ ಹಲವು ಗೀತ ಪ್ರಕಾರಗಳಿಗೆ ಸಂಬಂಧಿಸಿದಂತೆ ತರಬೇತಿ ನೀಡಲಾಗುವುದು. ಈ ಶಿಬಿರದಲ್ಲಿ ತರಬೇತಿ ನೀಡಲು ಸಂಗೀತ ಸಾಹಿತ್ಯ ಕ್ಷೇತ್ರದಲ್ಲಿ ಸಾಧನೆ ಮಾಡಿದ ಮಹಾನೀಯರನ್ನು ಕರೆಸಿ ತರಬೇತಿ ನೀಡಲಾಗುವುದು. ತರಬೇತಿ ಪಡೆದವರನ್ನು ಆಕಾಶವಾಣಿ

ದೂರದರ್ಶನದಲ್ಲಿ ಕಾರ್ಯಕ್ರಮ ಕೊಡಲು ಅನುವು ಮಾಡಿಕೊಡಲಾಗುವುದು. ಈ ಶಿಬಿರದಲ್ಲಿ ತರಬೇತಿ ಪಡೆದವರಿಗೆ ಪ್ರಶಸ್ತಿ ನೀಡಿ ಗೌರವಿಸಲಾಗುವುದು.

### ೪.೬. ವಿಚಾರ ಸಂಕಿರಣಗಳು

ಜಾನಪದ ವಿಚಾರಗಳನ್ನು ತಿಳಿಸುವಲ್ಲಿ ವಿಚಾರ ಸಂಕಿರಣಗಳು ಪ್ರಮುಖ ಪಾತ್ರವಹಿಸುತ್ತವೆ. ಕಣ್ಮರೆಯಾಗುತ್ತಿರುವ ಜನಪದ ಕಲೆ, ಜನಪದ ಶಿಕ್ಷಣ, ಜನಪದ ವಸ್ತುಗಳು, ಜಾನಪದ ಗೀತೆ, ಜನಪದ ಆಚಾರ-ವಿಚಾರ, ಸಂಸ್ಕೃತಿ, ಹಬ್ಬ, ಆಚರಣೆ, ಮುಂತಾದವುಗಳಿಗೆ ಸಂಬಂಧಿಸಿದಂತೆ ವಿಚಾರಗಳನ್ನು ಚರ್ಚಿಸಿ ಜನರಿಗೆ ತಿಳಿಸುವುದೇ ವಿಚಾರ ಸಂಕಿರಣದ ಮುಖ್ಯ ಉದ್ದೇಶ.

ಜಾನಪದ ಲೋಕದಲ್ಲಿ ಜಾನಪದಕ್ಕೆ ಸಂಬಂಧಿಸಿದಂತೆ ಒಂದಲ್ಲಾ ಒಂದು ವಿಚಾರ ಸಂಕಿರಣಗಳು ನಡೆಯುತ್ತಲೇ ಇರುತ್ತವೆ. ಈ ವಿಚಾರ ಸಂಕಿರಣಗಳಲ್ಲಿ ರಾಜ್ಯದ ಜಾನಪದ ವಿದ್ವಾಂಸರನ್ನು ಕರೆಯಿಸಿ ಬೋಧನೆ ಮಾಡಲಾಗುವುದು. ಇಲ್ಲಿ ಪರಸ್ಪರ ಚರ್ಚೆಗಳ ಮುಖಾಂತರ ವಸ್ತು ವೈವಿಧ್ಯತೆಯನ್ನು ತಿಳಿಸಲಾಗುವುದು.

ಇದರಿಂದ ನಶಿಸುತ್ತಿರುವ ಜಾನಪದ ಪರಂಪರೆಯನ್ನು ಉಳಿಸಿ ಬೆಳೆಸುವ ವಿಚಾರಗಳನ್ನು ಇಲ್ಲಿ ತಿಳಿಸಲಾಗುವುದು. ಈ ವಿಚಾರ ಸಂಕಿರಣದಲ್ಲಿ ಭಾಗವಹಿಸಿದ ಎಲ್ಲರಿಗೂ ಊಟ, ವಸತಿ ಸೌಕರ್ಯವನ್ನು ಕಲ್ಪಿಸಲಾಗುತ್ತದೆ. ಜೊತೆಗೆ ಪ್ರಶಸ್ತಿ, ಪುರಸ್ಕಾರ ನೀಡಿ ಗೌರವಿಸುತ್ತಾರೆ. ಹೀಗೆ ಜಾನಪದ ಲೋಕವು ಇಂತಹ ಕಾರ್ಯಕ್ರಮಗಳನ್ನು ನಡೆಸುತ್ತಲೇ ಬಂದಿರುವ ಜಾನಪದ ಸಾಂಸ್ಕೃತಿಕ ಕೇಂದ್ರವಾಗಿ ಪ್ರಜ್ವಲಿಸುತ್ತದೆ.

### ಟಿಪ್ಪಣಿಗಳು

೧. ಡಾ. ಚಕ್ಕರೆ ಶಿವಶಂಕರ್, ೨೦೦೧, ನಾಗಸಂಪದ, ಚಂದನ ಪ್ರಿಂಟರ್ಸ್, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩೮.

೨. ಪ್ರಜಾವಾಣಿ, ಆಗಸ್ಟ್ ೮, ೨೦೦೭, ಪು. ೪.

೩. ಜಿ. ನಾರಾಯಣ, ಜನವರಿ-ಡಿಸೆಂಬರ್, ೨೦೦೬, ಜಾನಪದ ಜಗತ್ತು, ಸಂಪುಟ-೨೭, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೫೫.

೪. ಅದೇ....., ಪು. ೫೬.

೫. ಡಾ. ಚಕ್ಕರೆ ಶಿವಶಂಕರ್, ೨೦೦೧, ನಾಗಸಂಪದ, ಚಂದನ ಪ್ರಿಂಟರ್ಸ್, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩೭.

೬. ಪ್ರಜಾವಾಣಿ, ಮೇ ೧೦, ೨೦೦೩, ಲಿಪ್ಯಂತರ ಕಮ್ಮಟ ಸಮ್ಮೇಳನ, ಪು. ೫.

೭. ಜಾನಪದ ಲೋಕ ರಾಯಭಾರಿ ಕಮ್ಮಟದ ವರದಿ ಮಾಹಿತಿ, ಜುಲೈ ೧೨, ೨೦೦೭.

೮. ಪ್ರೊ. ಡಿ. ಲಿಂಗಯ್ಯ, ಅಕ್ಟೋಬರ್-ಡಿಸೆಂಬರ್, ೨೦೦೦, ಜಾನಪದ ಜಗತ್ತು, ಸಂಪುಟ-೨೧, ಸಂಚಿಕೆ-೪, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೫೩.

೯. ಪ್ರೊ. ಡಿ. ಲಿಂಗಯ್ಯ, ಜನವರಿ-ಜೂನ್, ೨೦೦೭, ಜಾನಪದ ಜಗತ್ತು, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩೫.

೧೦. ಡಾ. ಚಕ್ಕರೆ ಶಿವಶಂಕರ್, ಅಕ್ಟೋಬರ್-ಡಿಸೆಂಬರ್, ೨೦೦೦, ಜಾನಪದ ಜಗತ್ತು, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೫೪.

• • •

## ಅಧ್ಯಾಯ ೫

# ಸಮಕಾಲೀನ ಸಂದರ್ಭ ಮತ್ತು ಜಾನಪದ ಲೋಕ

**ಈ** ಅಧ್ಯಾಯವು 'ಸಮಕಾಲೀನ ಸಂದರ್ಭ ಮತ್ತು ಜಾನಪದ ಲೋಕ' ಎಂಬುದನ್ನು ಕುರಿತಾದದ್ದು. ಸಮಕಾಲೀನ ಸಂದರ್ಭದಲ್ಲಿ ಜಾನಪದ ಲೋಕದ ಪಾತ್ರವನ್ನು ವಿವಿಧ ನೆಲೆಯಲ್ಲಿ ನೋಡಲಾಗಿದೆ. ಹಾಗೂ ಆಧುನಿಕತೆಯು ಜಾನಪದ ಪರಂಪರೆಯ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ ಆಧುನಿಕತೆಯ ಪರಿಣಾಮದಿಂದ ಜಾನಪದೀಯ ಅಂಶಗಳಾದ ಜನಪದ ಕಲೆ, ಜನಪದ ಶಿಕ್ಷಣ, ಜಾನಪದ ವಸ್ತು ಸಂಗ್ರಹಾಲಯಗಳು, ಜನಪದ ಸಾಹಿತ್ಯ, ಸಂಘ ಸಂಸ್ಥೆಗಳು, ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳು ಇನ್ನು ಮುಂತಾದ ಕಾರ್ಯ ಚಟುವಟಿಕೆಗಳ ಮೇಲಾದ ಪರಿಣಾಮವೇನು? ಮತ್ತು ಆಧುನಿಕತೆಯಿಂದ ಜನಪದ ಕಲೆಗಳ ಮೇಲಾದ ಪಲ್ಲಟಗಳೇನು? ಎಂಬ ವಿಷಯವನ್ನು ಈ ಅಧ್ಯಾಯವು ಒಳಗೊಂಡಿದೆ. ಅಲ್ಲದೆ ಇವತ್ತಿನ ಆಧುನಿಕತೆಯಿಂದ ಜಾನಪದ ಪರಂಪರೆಗಳು ಕಣ್ಮರೆ ಯಾಗುತ್ತಿವೆ. ಈ ಕಣ್ಮರೆಯಾಗುತ್ತಿರುವ ಜಾನಪದ ಪರಂಪರೆಯನ್ನು ಉಳಿಸಿ ಬೆಳೆಸಿ ಸಂರಕ್ಷಿಸಿ ಆಚರಿಸಲು ಅಥವಾ ಕಾರ್ಯಗತಗೊಳಿಸಲು ಜಾನಪದ ಲೋಕವು ಯಾವ ಕಾರ್ಯಕ್ರಮಗಳನ್ನು ಕೈಗೊಂಡಿದೆ ಎಂಬುದನ್ನು ತಿಳಿಯಲಾಗಿದೆ. ಜೊತೆಗೆ ಸರ್ಕಾರ ಮತ್ತು ಸಾರ್ವಜನಿಕರು ಮಾಡಬೇಕಾದ ಕೆಲಸ ಕಾರ್ಯಗಳೇನು ಎಂಬುದನ್ನು ಕುರಿತು ಬಹುಮುಖ್ಯವಾಗಿ ಚರ್ಚಿಸಲಾಗುವುದು.

ಜಾನಪದ ನಮಗಿಂದು ಹಳ್ಳಿಯ ಹಾಡಾಗಿ ಉಳಿದಿಲ್ಲ. ಜನಪ್ರಿಯ ಪಳೆಯುಳಿಕೆಯು ಅಲ್ಲ, ಗ್ರಾಮೀಣ ಪ್ರದೇಶದ ಅನಕ್ಷರಸ್ಥ ಸಮುದಾಯದ ನಡುವೆ ಬದುಕಿ ಉಳಿದಿರುವ ಹಾಡು, ಕುಣಿತ, ಪ್ರದರ್ಶನ, ಹಳೆಯ ಪಳೆಯ ಸರಕು ಸರಂಜಾಮುಗಳ ದಾಖಲಾತಿ ಸಂಗ್ರಹವಾಗಿಯಷ್ಟೆ ಉಳಿದಿಲ್ಲ. ಸಂಸ್ಕೃತಿಯೊಂದು ಸ್ಥಿರ ಬಿಂದುವಲ್ಲ. ಅದು ನಿರಂತರವಾಗಿ ಸಾಗುತ್ತಿರುವ ಪ್ರವಾಹ ಎಂಬುದನ್ನು ಒಪ್ಪಿಕೊಂಡು ನಮ್ಮ ಅಧ್ಯಯನ ಸಾಗಿ ಬರುತ್ತಿರುವುದರಿಂದ ಜಾನಪದದ ಬಗೆಗಿನ ಪರಿಭಾವನೆ ಇದೀಗ ಬದಲಾಗಿದೆ.

ಇಂದಿನ ಆಧುನಿಕ, ವೈಜ್ಞಾನಿಕ, ತಾಂತ್ರಿಕತೆ ತಂದ ಸಮಾಜದಲ್ಲಿ ಜಾನಪದ ಹುಟ್ಟುವ ಮೂಲ ಹಿಂದಿನಷ್ಟು ಸಮೃದ್ಧ ಅಲ್ಲದೆ ಹೋಗಬಹುದು. ಆದರೆ ಬದಲಾದ ಸಂದರ್ಭದಲ್ಲಿ ಜಾನಪದ ಇದ್ದೇ

ಇರುತ್ತದೆ.[೧] ನಿನ್ನೆಯ ರೂಪದಲ್ಲಿ ಅಲ್ಲ. ಇಂದಿನ ಕಾಲಕ್ಕೆ ತಕ್ಕಂತೆ ಹೊಸ ರೂಪದಲ್ಲಿ ಬೆಳೆಯುತ್ತಿರುವ ಜ್ಞಾನಶಾಖೆಯಾಗಿರುವುದರಿಂದ ಪಾರಂಪರಿಕ ತಿಳುವಳಿಕೆಗಳು ಹೊಸ ಆಕಾರ ಪಡೆದುಕೊಳ್ಳುತ್ತಿವೆ. ಪ್ರಸ್ತುತ ಬದುಕಿಗೆ ಸಲ್ಲದ ನೇತ್ಯಾತ್ಮಕ ಅಂಶಗಳು ಅಧ್ಯಯನದಲ್ಲಿ ಸೋಸಿಕೆಗೆ ಒಳಗಾಗಿ ಸಲ್ಲುವ ಅಂಶಗಳು ಮಾತ್ರ ಬದುಕಿ ಉಳಿಯುತ್ತಿವೆ.

ಆದರೆ ಇಂದು ಜಾನಪದ ಜ್ಞಾನಶಾಖೆಯಲ್ಲಿ ಮಾಹಿತಿಗಳ ಸಂಗ್ರಹ, ಜಾನಪದ ಶಿಕ್ಷಣ, ಜಾನಪದ ವಸ್ತುಗಳ ಸಂಗ್ರಹ ಜನಪದ ಕಲೆಗಳ ತರಬೇತಿ ಮತ್ತು ಪ್ರದರ್ಶನ, ಜಾನಪದ ಸಂಶೋಧನೆ, ಜಾನಪದ ಕಮ್ಮಟಗಳು, ತರಬೇತಿ ಶಿಬಿರಗಳು, ವಿಚಾರ ಸಂಕಿರಣಗಳು ಇನ್ನು ಮುಂತಾದವುಗಳ ಕೆಲಸವಷ್ಟೇ ನಡೆಯುತ್ತಿಲ್ಲ. ಸಮಕಾಲೀನ ಬದುಕಿನಲ್ಲಿ ಅದರ ವ್ಯಾಪ್ತಿ, ಆಳ ಕಾರ್ಯ ಹಾಗೂ ಪ್ರಸ್ತುತತೆಯನ್ನು ಶೋಧಿಸುತ್ತಾ ಅದರ ಚಲನಶೀಲತೆಯನ್ನು ಮನ್ನಿಸುತ್ತಾ ಅದು ತೋರುವ ಬದುಕಿನ ಎಲ್ಲ ಬಹುತ್ವಗಳನ್ನು ಒಪ್ಪಿಕೊಳ್ಳುತ್ತಾ ಅಧ್ಯಯನ ಸಾಗಿ ಬರುತ್ತಿದೆ.

ಇತ್ತೀಚಿನ ದಿನಗಳಲ್ಲಿ ಜಾನಪದದ ಅಳಿವು-ಉಳಿವಿನ ಬಗ್ಗೆ ತೀವ್ರವಾದ ಚರ್ಚೆ ವಿದ್ವಾಂಸರಲ್ಲಿ ನಡೆಯುತ್ತಿದೆ. ಬದಲಾಗುತ್ತಿರುವ ಸಂದರ್ಭದಲ್ಲಿಯೂ ಜಾನಪದವೂ ಪರಿವರ್ತಿತ ರೀತಿಯಲ್ಲಿ ಉಳಿದುಕೊಂಡು ಬರುತ್ತದೆ ಎಂದು ಒಂದು ವಾದವಾದರೆ, ಇನ್ನೊಂದು ವಾದ ತೀವ್ರವಾಗಿ ಬದಲಾಗುತ್ತಿರುವ ಸಮಾಜದಲ್ಲಿ ಜಾನಪದ ಬೆಳೆದು ಬರಲು ಸಾಧ್ಯವಿಲ್ಲ. ಅದು ಉಳಿಯುವುದೂ ಇಲ್ಲ. ಆದ್ದರಿಂದ ಅದರ ಸಂರಕ್ಷಣೆ ಆಗಬೇಕು ಎಂಬುದಾಗಿದೆ.[೨]

ಈ ಎರಡನೇ ಧೋರಣೆಯನ್ನು ಕರ್ನಾಟಕ ಜಾನಪದ ಪರಿಷತ್ತು ಹಾಗೂ ಜಾನಪದ ಲೋಕ ಹೊಂದಿದೆ ಮತ್ತು ಅದಕ್ಕೆ ತಕ್ಕಂತೆ ಅಪಾರವಾದ ಕೆಲಸವನ್ನು ಇವು ಮಾಡುತ್ತಿವೆ. ನಮ್ಮ ಅಭಿಪ್ರಾಯದಲ್ಲಿ ಈಗಿರುವ ಜಾನಪದ ಸಂಸ್ಕೃತಿಯು ಮುಂದೆ ಉಳಿಯುವುದಿಲ್ಲ. ಉಳಿಯುವುದಕ್ಕೆ ಬೇಕಾದ ಸಮಯ ಸಂದರ್ಭ ಪರಿಸರವೂ ಇಲ್ಲ. ಮೊದಲನೆಯ ಧೋರಣೆಯನ್ನು ನಾವು ಒಪ್ಪಲು ಮನಸ್ಸು ಬಾರದು. ಏಕೆಂದರೆ, ಇಲ್ಲಿಯವರೆಗೆ ಹೊಸ ಜಾನಪದ ಜನ್ಮ ತಾಳಿದ್ದು ನಮಗೆ ಕಂಡಿಲ್ಲ, ಕೇಳಿಲ್ಲ. ಪಟ್ಟಣಗಳ ಹೊಲಸು ಸ್ಥಳಗಳಲ್ಲಿ ಕಂಡುಬರುವ ಅಶ್ಲೀಲ ಚಿತ್ರಗಳು ಹಾಗೂ ಬರಹಗಳು. ಅದೂ ಜಾನಪದ ಎಂದು ವಾದಿಸುವವರಿಗೆ ಅದನ್ನು ನೋಡಿ ಸಂತೋಷ ಪಡೆಯಲು ನಮ್ಮ ಅಡ್ಡಿಯಿಲ್ಲ ಎಂದು ಹೇಳಬೇಕಾಗುತ್ತದೆ. ಆದರೆ ನಾವು ಉಳಿಸಬೇಕೆಂದಿರುವುದು ಮಲ್ಲಿಗೆಯ ಪರಿಮಳವುಳ್ಳ, ಸಹಸ್ರಾರು ವರ್ಷಗಳಿಂದ ನಮ್ಮ ಜನಮನವನ್ನು ಸಂತಸಗೊಳಿಸಿದ ಸತ್ವಯುತವಾದ ಜಾನಪದ.

ಸಹಸ್ರಾರು ವರ್ಷಗಳ ಜನಜೀವನವನ್ನು ಅಪ್ಪಿ ಆಲಂಗಿಸಿ ಹರ್ಷವನ್ನುಂಟು ಮಾಡಿದ ಆ ಸಂಪತ್ತು ನಮ್ಮ ಕೈಜಾರುತ್ತಿದೆ. ಈ ಶತಮಾನದಲ್ಲಾದ ಅಪಾರ ತಾಂತ್ರಿಕ ಹಾಗೂ ವೈಜ್ಞಾನಿಕ ಬೆಳವಣಿಗೆಗಳು ಯಾವ ಶತಮಾನದಲ್ಲೂ ಆಗಿಲ್ಲ. ಇದನ್ನು ನಾವು ಸ್ಪಷ್ಟವಾಗಿ ಅರಿತುಕೊಂಡರೆ ನಾವು ನಮ್ಮ ಕಿವಿಮರೆ, ಕಣ್ಮರೆಯಾಗುತ್ತಿರುವ ಸಂಸ್ಕೃತಿಯನ್ನು ಉಳಿಸಲು ಪ್ರಯತ್ನ ಮಾಡುವುದರಲ್ಲಿ ಸಂದೇಹವಿಲ್ಲ.[೩]

ಉಳಿಸುವುದೆಂದರೆ ಹೆಂಗಸರು ಬೆಳಗ್ಗೆ ಎದ್ದು ರಾಗಿ ಬೀಸಲಿ, ಬತ್ತ ಕುಟ್ಟಲಿ ಎಂದಲ್ಲ. ಆ ರಾಗಿ ಬೀಸುವಾಗ, ಬತ್ತ ಕುಟ್ಟುವಾಗ ಮತ್ತು ಇತರ ಸಂದರ್ಭಗಳಲ್ಲಿ ಹಾಡುತ್ತಿದ್ದ ಹಾಡು-ಪಾಡುಗಳು, ಜಾನಪದ ಕಲೆ, ವಸ್ತು, ಶಿಕ್ಷಣ, ಸಂಸ್ಕೃತಿ ಇವುಗಳನ್ನಾದರೂ ಸಂಗ್ರಹಿಸಬಾರದೇ? ಈ ಅರ್ಥದಲ್ಲಿ ನಾವು ಉಳಿಸಿ ಎಂದು ಹೇಳುತ್ತಿದ್ದೇವೆಯೇ ಹೊರತು ಸತ್ತ ಹೆಣವನ್ನು ಮನೆಯಲ್ಲಿಟ್ಟುಕೊಂಡು ಗೋಳಾಡಿ ಎಂದಲ್ಲ.

ನಮ್ಮ ಪುಸ್ತಕ ಸಾಹಿತ್ಯಕ್ಕೆ ಒಂದೆರಡು ಸಾವಿರ ವರ್ಷಗಳಷ್ಟೇ ವಯಸ್ಸಾಗಿರುವುದು. ಪುಸ್ತಕ ಸಾಹಿತಿಗಳು ಕಣ್ಮರೆಯಾದರೂ ಅವರ ಪುಸ್ತಕ ನಮ್ಮ ಮುಂದಿರುತ್ತವೆ. ಅವನ್ನು ಯಾವಾಗ ಬೇಕಾದರೂ ಓದಬಹುದು. ಆದರೆ ಪುಸ್ತಕ ಸಾಹಿತ್ಯದ ವಯಸ್ಸು ಸಹಸ್ರಾರು ವರ್ಷಗಳು. ಆದರೂ ಅದು ಬಾಯಿಂದ ಬಾಯಿಗೆ ಹರಿದು ಬಂದಿದೆ. ಜನಪದ ಕಲೆಗಳು, ಹಾಡುವವರು ಸತ್ತರೆ ಅವರ ಜೊತೆ ಅವರ ಪುಸ್ತಕದಲ್ಲಿರುವ ಅಪಾರ ಸಾಹಿತ್ಯವು ಸಾಯುತ್ತದೆ. ಅಂಥ ಸಾಹಿತ್ಯ ಮತ್ತೆ ಸೃಷ್ಟಿಯಾಗುವುದಿಲ್ಲ. ಅದನ್ನು ಕಳೆದುಕೊಂಡರೆ ಹೆತ್ತ ತಾಯನ್ನು ಕಳೆದುಕೊಂಡಂತೆ.

ಈ ಕಾರಣದಿಂದ ನಮ್ಮ ಅಕ್ಷರಸ್ಥರಲ್ಲಿ ಕೈ ಮುಗಿದು ಕೇಳಿಕೊಳ್ಳುವುದೇನೆಂದರೆ, ದಯವಿಟ್ಟು ನೀವು ನಾಲ್ಕಾರು ವರ್ಷ ಗ್ರಾಮೀಣರ ಸಂಪರ್ಕ ಪಡೆದು ಅವರೊಡನೆ ಬೆರೆತು ಅವರ ಬಾಯಲ್ಲಿರು ವುದನ್ನೆಲ್ಲಾ ಅದು ಹಾಡಾಗಲೀ, ಪಾಡಾಗಲಿ, ಮಾತಾಗಲೀ, ಕತೆಯಾಗಲಿ, ವಸ್ತುವಾಗಲಿ, ಗಾದೆಯಾಗಲೀ, ಒಗಟಾಗಲೀ, ಕಲೆಯಾಗಲೀ ಸಂಗ್ರಹ ಮಾಡಿ ಎಂದು. ಜಾನಪದ ಲೋಕವು ಸಾರ್ವಜನಿಕರಿಗೆ ಹೇಳುತ್ತಾ ಈ ಕೆಲಸವನ್ನು ಮಾಡುತ್ತಿದೆ.

ಹಿಂದಣ ಹೆಜ್ಜೆಯನರಿಯದೇ ಮುಂದಣ ಹೆಜ್ಜೆಯ ಅರಿಯಲಾರರು ಎಂಬ ಅಲ್ಲಮನ ಮಾತಿನಂತೆ ಜನಪದವನ್ನರಿಯದೇ ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಜನಪದವನ್ನು ಅರಿಯುವುದು ನಮ್ಮ ಪೂರ್ವಜರ ಜನಪದ ಕಲೆಗಳು, ಜೀವನ ಕಲೆ, ಕುಶಲ ಕಲೆ, ಹಾಡು, ಕುಣಿತ, ಸಂಗೀತ, ಸಾಹಿತ್ಯ, ಹಬ್ಬ, ಜಾತ್ರೆ, ಉತ್ಸವ, ಹೀಗೆ ಜಾನಪದ ವಸ್ತು ವಿಶೇಷಗಳನ್ನು ಉಳಿಸಿ ಬೆಳೆಸು ವುದು ನಮ್ಮೆಲ್ಲರ ಕರ್ತವ್ಯವಾಗಿದೆ.

ಆದರೆ ಇವುಗಳು ಇವತ್ತಿನ ಆಧುನಿಕತೆಯ ಪ್ರಭಾವದಿಂದ ನಶಿಸುತ್ತಿವೆ. ಕಾರಣ ಜನರ ಅಭಿವ್ಯಕ್ತಿ ಮತ್ತು ಅಭಿರುಚಿಗಳಲ್ಲಿ ಬದಲಾವಣೆಗಳಾಗುತ್ತಿವೆ. ಜಾಗತೀಕರಣದ ಈ ಸಂದರ್ಭದಲ್ಲಿ ಜಾನಪದ ಎಂದರೆ ಜನರಲ್ಲಿ ಹಳ್ಳಿಗರ, ಅನಕ್ಷರಸ್ಥರ, ಹಿಂದುಳಿದವರ, ನಾಗರೀಕತೆಯಿಂದ ಹೊರಗಿರುವವರ, ರೈತರ, ನಾಗರೀಕತೆಯ ಒಳಗಿದ್ದರೂ ಹಳೆಯದನ್ನು ಉಳಿಸಿಕೊಂಡು ಬಂದವರಿಗೆ ಸಂಬಂಧಿಸಿದ ಆಚರಣೆಗಳು ಎಂಬ ತಪ್ಪು ಭಾವನೆ ಇವತ್ತಿನ ಆಧುನಿಕ ಜನರಲ್ಲಿ ಮನೆ ಮಾಡಿದೆ. ಇದರಿಂದ ಇವುಗಳನ್ನು ಆಚರಿಸುವುದು, ಶೇಖರಿಸುವುದು, ಸಂರಕ್ಷಿಸುವುದು ಕೀಳೆಂದು ತಿಳಿದು ಇವುಗಳನ್ನು ನಿರ್ಲಕ್ಷಿಸುತ್ತಿದ್ದಾರೆ. ಜಾನಪದ ವಸ್ತುಗಳು ಇವತ್ತು ಮನೆಯಲ್ಲಿದ್ದರೆ ಅವುಗಳನ್ನು ಬಿಸಾಡುವಂತಹ ಸ್ಥಿತಿ

ಉದ್ಭವಿಸಿದೆ. ಕಾರಣ ಇವುಗಳನ್ನು ಮನೆಯಲ್ಲಿಟ್ಟರೆ ಮರ್ಯಾದೆ, ಅಂತಸ್ತು, ಸ್ಥಾನಮಾನಗಳು ಕಡಿಮೆ ಎಂದು ತಿಳಿದು ಅವುಗಳನ್ನು ಬಿಸಾಡುತ್ತಿದ್ದಾರೆ.

ಜಾನಪದ ವಸ್ತು ಸಂಗ್ರಹಾಲಯಗಳು ಯಾವುದೇ ಪ್ರದೇಶದ, ಕಾಲದ, ಜನಾಂಗದ ಸಾಂಸ್ಕೃತಿಕ ಇತಿಹಾಸದ ಪುನರ‍್ರಚನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ.[೪] ಪರಂಪರಾಗತ ಸಂಸ್ಕೃತಿಯ ವಿವಿಧ ವಸ್ತುಗಳನ್ನು ಗುರ್ತಿಸಲು, ನಮ್ಮ ಪೂರ್ವಜರ ಜೀವನ ಕಲೆ, ಆಚಾರ-ವಿಚಾರ, ಸಂಪ್ರದಾಯ, ಕುಶಲಕಲೆ ಮುಂತಾದವುಗಳನ್ನು ತಿಳಿಯಲು ಇವು ತೀರಾ ಅವಶ್ಯಕವಾಗಿವೆ. ಜನಾಂಗದ ಸಂಸ್ಕೃತಿಯನ್ನು ಗುರುತಿಸುವವರಿಗೆ, ನಾಗರೀಕತೆಯ ಮಜಲುಗಳನ್ನು ತಿಳಿಯುವವರಿಗೆ ಇಂತಹ ವಸ್ತು ಸಂಗ್ರಹಾಲಯಗಳು ನೆರವಾಗುತ್ತವೆ. ಆದರೆ ಇಂತಹ ವಸ್ತು ಸಂಗ್ರಹಾಲಯಗಳು ಇಂದು ಆಧುನಿಕತೆಯ ಪ್ರಭಾವದಿಂದ ನಶಿಸುತ್ತಿವೆ. ಜನರು ಇಂತಹ ವಸ್ತು ವಿಶೇಷಗಳನ್ನು ಬಳಸುವುದು ಹಾಗೂ ಆಚರಿಸುವುದು ಕೀಳೆಂದು ತಿಳಿದು ಅಂತಹ ವಸ್ತುಗಳು ನಿಷ್ಪ್ರಯೋಜಕ ಎಂದು ಬಿಸಾಡುತ್ತಿದ್ದಾರೆ. ಅದರ ಬದಲು ಪ್ಲಾಸ್ಟಿಕ್ ಮತ್ತು ಇತರೆ ವಸ್ತುಗಳನ್ನು ಬಳಸುತ್ತಿದ್ದಾರೆ. ಅಂತೆಯೇ ಜನಪದ ಕಲೆಗಳು ಇಂದು ಕ್ಷೀಣಿಸುತ್ತಿವೆ. ಜನಪದ ಕಲೆಗಳ ಪ್ರದರ್ಶನ ಮಾಡುವುದು ಕೀಳೆಂಬ ಭಾವನೆ ಜನರಲ್ಲಿ ಮೂಡಿದೆ. ಈ ಕಲೆಗಳನ್ನು ಪ್ರದರ್ಶಿಸುವವರು ಹಾಗೂ ನೋಡುವವರು ಸಹ ಬೆರಳೆಣಿಕೆಯಷ್ಟು ಜನರಾಗಿದ್ದಾರೆ. ಕಾರಣ ಆಧುನಿಕತೆಯ ಹಾವಳಿಯ ಪ್ರಭಾವವಾಗಿದೆ.[೫] ಹಿಂದಿನ ದಿನಗಳಲ್ಲಿ ಜನಪದ ಕಲೆಗಳು ಎಂದರೆ ಎಲ್ಲೆಲ್ಲೂ ಸಂಭ್ರಮ ಸಡಗರ. ಒಂದು ರೀತಿಯಲ್ಲಿ ಹಬ್ಬದ ವಾತಾವರಣ ಏರ್ಪಡುತ್ತಿತ್ತು. ಜನಪದ ಕಲೆಗಳನ್ನು ಪ್ರದರ್ಶಿಸುವ ವರಿಗೆ ಸಾಕಷ್ಟು ಗೌರವಾಧಾರಗಳು ಸಿಗುತ್ತಿದ್ದವು. ಯಾವುದೇ ಕಲೆಗೆ ಸಾಕಷ್ಟು ಪ್ರೋತ್ಸಾಹ ಸಿಗುತ್ತಿತ್ತು. ಅವುಗಳನ್ನು ಅಷ್ಟರಮಟ್ಟಿಗೆ ಜನರು ಪೋಷಿಸಿಕೊಂಡು ಬರುತ್ತಿದ್ದರು. ಪರಿಸ್ಥಿತಿ ಬದಲಾದಂತೆಲ್ಲ ಪ್ರದರ್ಶಕ ಕಲೆಗಳು ಕೂಡ ಬದಲಾವಣೆ ಕಂಡವು.

ಸಮೂಹ ಮಾಧ್ಯಮಗಳಾದ ವೃತ್ತಪತ್ರಿಕೆ, ರೇಡಿಯೋ, ದೂರದರ್ಶನ ಮತ್ತು ಅಂತರ್ಜಾಲ ಹಾಗೂ ಹೊಸ ತಂತ್ರಜ್ಞಾನಗಳಲ್ಲಿ ಆದಂತಹ ಕ್ರಾಂತಿಕಾರ ಬದಲಾವಣೆಗಳು. ಇವುಗಳಿಗೆ ಪೂರಕವಾಗಿ ವೀಡಿಯೋ, ಆಡಿಯೋ ಮತ್ತು ಸಿನಿಮಾಗಳು ತಮ್ಮ ಪ್ರಭಾವಗಳನ್ನು ಬೀರುವುದರಿಂದ ಜಾನಪದ ಪರಂಪರೆಗಳಾದ ಕಲೆ, ಸಾಹಿತ್ಯ, ನೃತ್ಯ, ಜಾನಪದ ವಸ್ತುಗಳ ಬಳಕೆ, ಹಬ್ಬ, ಆಚರಣೆಗಳು, ಉತ್ಸವ, ಜಾತ್ರೆ, ಜಾನಪದ ಹಾಡುಗಳು ಇನ್ನು ಮುಂತಾದವುಗಳು ಗಣನೀಯವಾಗಿ ಗೌಣವಾದವು.[೬] ಇಂತಹ ಜಾನಪದ ಪರಂಪರೆಗಳಿಗೆ ಬೆಳವಣಿಗೆ ಇಲ್ಲದಿದ್ದರೆ ಅವು ಉಳಿಯುವ ಸಾಧ್ಯತೆ ಕಡಿಮೆ. ಬೆಳವಣಿಗೆಯು ಸಹ ಅವುಗಳ ಮೇಲೆ ಪರಿಣಾಮವನ್ನು ಬೀರುತ್ತದೆ.

ಈಗಿನ ಜನರೂ ಸಹ ಜನಪದ ಕಲೆ, ಜಾನಪದ ವಸ್ತುಗಳು, ಹಾಡು-ಪಾಡು, ಕುಣಿತ ಮೆರೆತ, ಸಂಪ್ರದಾಯ, ಜಾನಪದ ಭೋದನೆ, ಸಂಶೋಧನೆ, ಆಚರಣೆಗಳು ಎಂದರೆ ಅವುಗಳನ್ನು ನಿರ್ಲಕ್ಷಿಸುತ್ತಿದ್ದಾರೆ. ಕಾರಣ ಹೊಸ ರೀತಿಯ ತಂತ್ರಜ್ಞಾನದಿಂದ ಕೂಡಿದ ಸಿನಿಮಾಗಳು, ದೂರದರ್ಶನವೂ ಸಹ ಇದಕ್ಕೆ

ಹೊರತಾಗಿಲ್ಲ. ಜಾಗತೀಕರಣದ ಪ್ರಭಾವದಿಂದ ಇಂದಿನ ಜನರು ಬರೀ ಶೋಕಿಗಾಗಿ ಯಾವುದಾದರೊಂದು ನೃತ್ಯವನ್ನು ನೋಡುವುದು. ಕೀಳು ಅಭಿರುಚಿಯನ್ನು ಬಿಂಬಿಸುವ ಚಲನಚಿತ್ರವನ್ನು ನೋಡುವುದು ಸಹಜ ವಾಗಿದೆ.

ಅಲ್ಲದೆ ಜಾನಪದ ಪರಂಪರೆಯ ಮಹತ್ವದ ಬಗ್ಗೆ ಸರಿಯಾಗಿ ತಿಳಿದಿಲ್ಲದ ಎಷ್ಟೋ ಜನರನ್ನು ನಮ್ಮ ಸುತ್ತಮುತ್ತ ನೋಡುತ್ತೇವೆ. ಈ ಅವಸ್ಥೆ ಬರಲು ಯಾರು ಕಾರಣ? ನಿರ್ಲಕ್ಷ್ಯವೇ? ಪರಿಸ್ಥಿತಿಯೇ? ಅಥವಾ ಸಂದರ್ಭ ಎನ್ನೋಣವೇ! ಒಟ್ಟಾರೆಯಾಗಿ ನೋಡಿದಾಗ ಆಧುನಿಕ ತಂತ್ರಜ್ಞಾನಗಳಿಂದ ಜಾನಪದ ವಸ್ತು ವಿಶೇಷಗಳ ಅಳಿವು ಆಗಿದೆ. ಹಳ್ಳಿಗಳೂ ಕೂಡ ಇದಕ್ಕೆ ಹೊರತಾಗಿಲ್ಲ. ಏಕೆಂದರೆ ಎಲ್ಲರೂ ಬಯಸುವುದು ನಾವೀನ್ಯತೆ.

ಉದಾ. ಯಾವುದಾದರೊಂದು ಜನಪದ ಕಲಾ ಪ್ರದರ್ಶನವಾಗುತ್ತಿದೆ ಎಂದರೆ ಅದರಲ್ಲೇನಿದೆ? ಅದರ ಬದಲು ಬೇರೆ ಯಾವುದಾದರೂ ಮಾಧ್ಯಮವನ್ನು ನೋಡೋಣ ಎಂಬ ಭಾವನೆ ಜನರಲ್ಲಿ ಬೆಳೆದಿದೆ. ಪ್ರಸ್ತುತ ಸಂದರ್ಭದಲ್ಲಿ ಜನಪದ ಕಲಾವಿದರಿಗೆ ಸರಿಯಾದ ಪೋಷಣೆ ಸಿಗುತ್ತಿಲ್ಲ. ಅವರನ್ನು ಕರೆಸಿ ಆಟ ಆಡಿಸುವ ರೂಢಿ ಬಹಳ ಕಡಿಮೆಯಾಗಿದೆ. ಅಲ್ಲದೆ ಕಲಾವಿದರಿಗೆ ಸರಿಯಾದ ಸ್ಥಾನಮಾನ ದೊರೆತಿಲ್ಲ. ಹಳ್ಳಿಗಳಲ್ಲಿ ರೇಡಿಯೋ ಮತ್ತು ದೂರದರ್ಶನಗಳ ಪರಿಚಯ ಆದಾಗಿನಿಂದ ಈ ಕಲೆಗಳಿಗೆ ಮೊದಲಿದ್ದ ಸ್ಥಾನಮಾನ ದೊರೆಯದೆ ಹೋದದ್ದು ವಿಪರ್ಯಾಸವೇ ಸರಿ. ಎಲ್ಲವೂ ಸಹ ಅನಿವಾರ್ಯ ಎಂಬಂತೆ ನಡೆದುಕೊಂಡು ಬಂದಿದೆ.[೬]

ಕಂಪ್ಯೂಟರ್ ಯುಗ ಪ್ರಾರಂಭವಾದಾಗಿನಿಂದ ಎಷ್ಟೋ ಬದಲಾವಣೆಗಳು ಕಂಡುಬಂದವು. ಪ್ರತಿದಿನವೂ ಹೊಸ ಜಗತ್ತನ್ನು ತೋರಿಸುವ ಈ ಸಾಧನದಿಂದಾಗಿ ಅನಿವಾರ್ಯ ಎಂಬಂತೆ ಕಂಡುಬಂದವು.

ಉದಾ. ಮನೆಯಲ್ಲಿರುವ ಮಡಿಕೆ, ಕುಡಿಕೆ, ಮೊರ, ವಾಡೆ, ಗುಡಾಣ, ಪೆಟ್ಟಿಗೆಗಳು, ತೊಟ್ಟಿಲುಗಳು, ಮುಂತಾದವುಗಳ ಬಳಕೆ ನಾಶವಾಗಿ ಬದಲಾಗಿ ತಾಂತ್ರಿಕ ಉಪಕರಣಗಳ ಬಳಕೆ ಹೆಚ್ಚಾಯಿತು. ಕೃಷಿ ಸಲಕರಣೆಗಳಾದ ನೇಗಿಲು, ನೊಗ, ಆರೆ, ಪಿಕಾಶಿ, ಗುದ್ದಲಿ ಇವುಗಳ ಬದಲಿಗೆ ಟ್ರ್ಯಾಕ್ಟರ್, ಟಿಲ್ಲರ್ ಹಾಗೂ ತಾಂತ್ರಿಕ ಉಪಕರಣಗಳ ಬಳಕೆ ಹೆಚ್ಚಾಯಿತು. ಜನಪದ ಕಲೆಗಳ ಪ್ರದರ್ಶನ ನೋಡುವ ಬದಲು ಆರ್‌ಕೆಸ್ಟ್ರಾ, ಮಿಮಿಕ್ರಿ ಮೊದಲಾದವುಗಳನ್ನು ನೋಡಲು ಶುರುವಾದರು.

ಹಬ್ಬ, ಜಾತ್ರೆ, ಉತ್ಸವ, ಪೂಜೆ, ಪುರಸ್ಕಾರ, ಆಚರಣೆಗಳನ್ನು ಬಿಟ್ಟು ಐಟಿ-ಬಿಟಿ ಕಡೆಗೆ ವಾಲಿದರು. ಕಮ್ಮಾರಿಕೆ, ಕುಂಬಾರಿಕೆ, ಮರಗೆಲಸ ಮುಂತಾದ ವೃತ್ತಿ ಕೆಲಸಗಳನ್ನು ಬಿಟ್ಟು ವೈಜ್ಞಾನಿಕವಾಗಿ ಬೆಳೆಯ ತೊಡಗಿದರು. ಜಾನಪದ ಕಮ್ಮಟಗಳು, ವಿಚಾರ ಸಂಕಿರಣಗಳು, ತರಬೇತಿ ಶಿಬಿರಗಳು, ಜಾನಪದ ಸಂಶೋಧನೆ, ಬೋಧನೆ ಮುಂತಾದ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳಲ್ಲಿ ನಿರತರಾಗುವ ಬದಲು ವೈಜ್ಞಾನಿಕ ಮತ್ತು ತಾಂತ್ರಿಕ ಕೆಲಸ ಕಾರ್ಯಗಳಲ್ಲಿ ನಿರತರಾದರು.

ಹೀಗೆ ಜಾನಪದ ಪರಂಪರೆಗಳಾದ ಕಲೆ, ಸಾಹಿತ್ಯ, ಸಂಸ್ಕೃತಿ, ಹಬ್ಬ, ಜಾತ್ರೆ, ಉತ್ಸವ, ಜಾನಪದ ಹಾಡು, ಲಾವಣಿ ಪದಗಳು, ಕುಣಿತ - ಮೆರೆತ, ಜಾನಪದ ವಸ್ತುಗಳ ಬಳಕೆ, ಕಲೆಗಳ ಪ್ರದರ್ಶನ, ಆಚರಣೆಗಳು, ರೂಢಿ ಸಂಪ್ರದಾಯಗಳು, ಪೂಜೆ ಪುರಸ್ಕಾರ ಮುಂತಾದವುಗಳು ದಿನದಿಂದ ದಿನಕ್ಕೆ ಕ್ಷೀಣಿಸುತ್ತಾ ಬಂದಿವೆ.

ಭಾರತೀಯ ಸಮಾಜಿಕ ಸಂದರ್ಭದಲ್ಲಿ ಆಧುನಿಕತೆಯ ಆಗಮನದೊಂದಿಗೆ ಜಾನಪದದ ಅವನತಿಯು ಪ್ರಾರಂಭವಾಯಿತು. ಶಿಕ್ಷಣ ಕ್ಷೇತ್ರದಲ್ಲಿ ನಮ್ಮ ಪರಂಪರೆಯನ್ನು ಸಂಪೂರ್ಣವಾಗಿ ಕಡೆಗಣಿಸಲಾಗಿದೆ. ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೆ ನಮ್ಮ ಯುವಕರು ಪರಂಪರೆಯ ವಿಚಾರಗಳ ಅರಿವನ್ನು ಪಡೆಯುವುದಿಲ್ಲ. ಇದು ಒಂದೆಡೆಯಾದರೆ, ಆಧುನಿಕತೆ ತಂದ ಯಾಂತ್ರಿಕ ಸೌಲಭ್ಯಗಳು ಜನಪದರನ್ನು ಜಾನಪದ ಸಂದರ್ಭಗಳಿಂದ ದೂರ ತಳ್ಳಿರುವುದು ಅಷ್ಟೇ ಮುಖ್ಯ ವಿಚಾರವಾಗಿದೆ.[೮] ಕುಟ್ಟುವ, ಬೀಸುವ ಕ್ರಿಯೆಗಳ ಕಣ್ಮರೆಯೊಂದಿಗೆ ಗೀತೆಗಳು, ಟ್ರ್ಯಾಕ್ಟರ್ ಆಗಮನದೊಂದಿಗೆ ನೇಗಿಲ ಪದಗಳು ಕಣ್ಮರೆಯಾದವು. ಸಿನಿಮಾ, ದೂರದರ್ಶನದ ಹಾವಳಿಯಿಂದ ಪ್ರದರ್ಶನ ಕಲೆಗಳು ಹೋದವು. ಕಾಲದ ಬದಲಾವಣೆಯೊಂದಿಗೆ ಸ್ಪರ್ಧಿಸಿ ಸೋಲುವ ಜನಪದ ಕಲೆಗಳು, ಆಚರಣೆ, ಪೂಜೆ ಪುರಸ್ಕಾರ, ಹಬ್ಬ, ಜಾತ್ರೆ, ಉತ್ಸವಗಳು, ಕರಕುಶಲ ಕಲೆಗಳು, ಜಾನಪದ ವಸ್ತುಗಳು, ಜಾನಪದ ಸಾಹಿತ್ಯ, ಹಾಡು-ಪಾಡು, ನೃತ್ಯ, ಕುಣಿತ-ಮೆರೆತ, ರೂಢಿ-ಸಂಪ್ರದಾಯ ಮುಂತಾದವುಗಳು ಬಹುಕಾಲ ಉಳಿಯಲಾರವು. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ನಮ್ಮ ಜಾನಪದ ಪರಂಪರೆಯ ಕಲೆ, ಆಚರಣೆ, ಸಂಪ್ರದಾಯಗಳು ಕಾಲದೊಂದಿಗೆ ಸ್ಪರ್ಧಿಸಿ ಸೋತುದಲ್ಲ. ಅವುಗಳನ್ನು ಆಧುನಿಕತೆಯ ಪ್ರಭಾವದಿಂದ ಉದ್ದೇಶಪೂರ್ವಕವಾಗಿ ವಿನಾಶಕ್ಕೆ ತಳ್ಳಲಾಗುತ್ತಿದೆ. ಇದು ವಿಷಾದದ ಸಂಗತಿ.

ಯಾವುದೇ ಸಮಾಜದ ಪರಂಪರೆಯ ಅವನತಿಯು ಆ ಸಮಾಜದ ಬಹುದೊಡ್ಡ ದುರಂತ ಎನ್ನಬಹುದು. ಜಾಗತೀಕರಣದ ಪ್ರಭಾವದಿಂದ ನಮ್ಮ ಜಾನಪದ ಪರಂಪರೆ ಅವನತಿ ಹೊಂದುತ್ತಿದೆ. ಜೀವಂತಿಗೆ ಹೊಂದಿದ ಸಾಂಸ್ಕೃತಿಕ ಸ್ಥಿತ್ಯಂತರಗಳು ಇಂದು ತೀವ್ರಗೊಳ್ಳುತ್ತಿವೆ. ಬಹುರೂಪಿ ಸಂಸ್ಕೃತಿಯ ವೈವಿಧ್ಯತೆ ನಾಶ ಹೊಂದಿ ಏಕರೂಪಿ ವಿಚಾರಧಾರೆ ಅಸ್ತಿತ್ವವನ್ನು ಪಡೆದುಕೊಳ್ಳುತ್ತಿದೆ. ಇದೆಲ್ಲವೂ ನಿಜವೇ ಆದರೂ ಜಾಗತೀಕರಣವನ್ನು ತಡೆಯುವುದಂತು ಸಾಧ್ಯವಿಲ್ಲ. ಆದರೆ ಎಚ್ಚರಿಕೆಯಿಂದ ನಿಭಾಯಿಸಿದ್ದಲ್ಲಿ ಅದರಿಂದಾಗುವ ವಿನಾಶವನ್ನು ಕಡಿಮೆ ಮಾಡಬಹುದು.

ನಮ್ಮ ಜಾನಪದದ ಒಡಲಿನಲ್ಲಿ ಜಾಗತೀಕರಣದ ಸವಾಲನ್ನು ಎದುರಿಸಲು ಬೇಕಾಗುವ ಅಂತಸ್ಸತ್ವವಿದೆ. ಅದನ್ನು ಹೆಕ್ಕಿ ತೆಗೆದು ನಮ್ಮ ಜನತೆಯ ಮುಂದಿಡಬೇಕಾಗಿದೆ. ಜಾನಪದ ಪರಂಪರೆ ಮತ್ತು ಜಾಗತೀಕರಣವನ್ನು ಮುಖಾಮುಖಿಯಾಗಿಸಿ ಪರಂಪರೆಯ ಸತ್ವವನ್ನು ಸಾರಬೇಕಾಗಿದೆ.[೯] ಸಂಕ್ರಮಣ ಕಾಲದ ಗೊಂದಲ, ಗಡಿಬಿಡಿ, ಭಯ, ಆತಂಕಗಳು ಕಾಡುವುದು ಸಹಜ. ಈ ಎಲ್ಲಾ ಭಯ ಆತಂಕಗಳ

ಆಚೆಗೆ ನಿಂತು ವಾಸ್ತವದ ನೆಲೆಯನ್ನು ಕಂಡುಕೊಳ್ಳಬೇಕಾಗಿದೆ. ದೇಶಿ ಸಂಸ್ಕೃತಿಗಳ ಚಿಂತನಾ ನೆಲೆಯನ್ನು ಗಟ್ಟಿಗೊಳಿಸಬೇಕಾಗಿದೆ. ಪ್ರಭುತ್ವದ ಅಡಿಯಲ್ಲಿ ನಲುಗಿದ ಸಮುದಾಯಗಳ ನೋವಿನ ಮಿಡಿತಗಳು ಈ ನೆಲದ ಸಂಸ್ಕೃತಿಯಲ್ಲಿ ನೆಲೆಗೊಂಡಿವೆ. ಅವುಗಳನ್ನು ಶೋಧಿಸುವ, ಪುನರ್ ವ್ಯಾಖ್ಯಾನಿಸುವ, ಅರ್ಥ ಕಟ್ಟುವ ಕ್ರಿಯೆ ಇಂದು ತುರ್ತಾಗಿ ನಡೆಯಬೇಕಾಗಿದೆ. ಜನಪದ ಸಮುದಾಯ ಕಟ್ಟಿಕೊಡುವ ಮಾದರಿಗಳನ್ನು ದಿನನಿತ್ಯದ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕಾಗಿದೆ.

ಜಾಗತೀಕರಣದ ಭರಾಟೆಯಲ್ಲಿ ನಮ್ಮ ಜಾನಪದ ಪರಂಪರೆಯನ್ನು ಉಳಿಸಿಕೊಳ್ಳಬೇಕಾದರೆ, ಜಾನಪದವನ್ನು ಪ್ರಾಥಮಿಕ ಶಿಕ್ಷಣದ ಹಂತದಿಂದಲೇ ಪರಿಚಯಿಸುವ ಕೆಲಸ ತುರ್ತಾಗಿ ಪ್ರಾರಂಭವಾಗ ಬೇಕು.[೧೦] ಜಾನಪದವನ್ನು ಉನ್ನತ ಶಿಕ್ಷಣದಲ್ಲಿ ವಿಶೇಷ ವಿಷಯವನ್ನಾಗಿ ಅಧ್ಯಯನ ಮಾಡಿದವರಿಗೆ ಉದ್ಯೋಗವಕಾಶಗಳನ್ನು ಹೆಚ್ಚಿಸಬೇಕು. ಸಾರ್ವಜನಿಕ ಕ್ಷೇತ್ರಗಳಲ್ಲಿ ಜನಪದ ಕಲೆಗಳ ತರಬೇತಿ ಹಾಗೂ ಪ್ರದರ್ಶನ, ಪ್ರಸಾರಕ್ಕೆ ಹೆಚ್ಚು ಒತ್ತು ನೀಡಬೇಕು. ಜಾನಪದ ವಸ್ತು ವಿಶೇಷಗಳಿಗೆ ಪ್ರೋತ್ಸಾಹ ನೀಡಬೇಕು. ಜಾನಪದ ಜಾತ್ರೆ, ಹಬ್ಬ, ಉತ್ಸವ, ಇವುಗಳನ್ನು ಬೆಳೆಸಬೇಕು. ಜಾನಪದಕ್ಕೆ ಸಂಬಂಧಿಸಿದಂತೆ ತರಬೇತಿ ಶಿಬಿರಗಳು, ವಿಚಾರ ಸಂಕಿರಣಗಳು, ಕಮ್ಮಟಗಳನ್ನು ನಡೆಸಬೇಕು.

ಪುರಾತನ ಕಾಲದಿಂದಲೂ ಬಂದಿರುವ ಹಾಡು, ನೃತ್ಯ, ಸಂಗೀತ, ಜಾನಪದ ಪದಗಳು, ಜನಪದ ಕಲೆಗಳ ಕುಣಿತ ಮೆರೆತ ಹೀಗೆ ಮುಂತಾದವುಗಳಿಗೆ ಸಂಬಂಧಿಸಿದಂತೆ ವೀಡಿಯೋ ಚಿತ್ರೀಕರಣ ಮಾಡಬೇಕು. ಗ್ರಾಮೀಣ ಕ್ರೀಡೆಗಳನ್ನು ಬೆಳೆಸುವುದು. ಜನಪದ ಕಲಾವಿದರಿಗೆ ಪ್ರೋತ್ಸಾಹ, ಗೌರವಧನ, ಪ್ರಶಸ್ತಿ ನೀಡಿ ಸನ್ಮಾನಿಸಬೇಕು. ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಚಟುವಟಿಕೆಗಳನ್ನು ಹೆಚ್ಚು ಜನಪ್ರಿಯವಾಗಿ ಆಚರಿಸಬೇಕು.

ಆಗ ಮಾತ್ರ ಜಾಗತೀಕರಣದ ವೇಗ ಮತ್ತು ಅದರ ಏಕರೂಪಿ ನೆಲೆಯ ತೀವ್ರತೆಯನ್ನು ತಡೆಯಲು ಜಾನಪದ ಧ್ಯಾನಸ್ಥ ಮನೋಸ್ಥಿತಿಯಿಂದ ರೂಪಿತವಾದ ಮಾದರಿಗಳು ಜಾಗತೀಕರಣದ ಸವಾಲಿಗೆ ಉತ್ತಮ ಮದ್ದಾಗ ಬಲ್ಲದು.

**ಜಾನಪದ ಸಂಘ-ಸಂಸ್ಥೆಗಳು**

ಕರ್ನಾಟಕದಲ್ಲಿ ಜಾನಪದ ಅಧ್ಯಯನ ವ್ಯವಸ್ಥಿತವಾಗಿ ನಡೆದುಕೊಂಡು ಬರುವಲ್ಲಿ ವಿವಿಧ ಸಂಘ ಸಂಸ್ಥೆಗಳು ಮತ್ತು ಪತ್ರಿಕೆಗಳು ಬಹುಮುಖ್ಯ ಪಾತ್ರ ವಹಿಸುತ್ತಿವೆ.[೧೧] ಆ ಕಾರಣದಿಂದಲೇ ಭಾರತದ ಬೇರೆ ಯಾವ ರಾಜ್ಯಕ್ಕಿಂತಲೂ ಕರ್ನಾಟಕ, ಜಾನಪದ ಅಧ್ಯಯನದಲ್ಲಿ ಅಗ್ರಪಂಕ್ತಿಯಲ್ಲಿರುವಂತಾಗಿದೆ.

ಕನ್ನಡ ಸಾಹಿತ್ಯ ಪರಿಷತ್ತು, ಜಾನಪದ ಸಂಬಂಧವಾದ ಅನೇಕ ಗಮನಾರ್ಹ ಯೋಜನೆಗಳನ್ನು ಹಾಕಿಕೊಂಡು ಯಶಸ್ವಿಯಾಗಿ ನಿರ್ವಹಿಸಿದೆ. ಬಹುಮಹತ್ವದ ಜಾನಪದ ಕೃತಿಗಳನ್ನು ಪರಿಷತ್ತು ಪ್ರಕಟಿಸಿದೆ. ಅಕಾರಾದಿಯಾಗಿ ಮತ್ತು ವರ್ಣಚಿತ್ರ ಸಹಿತವಾಗಿ ಕರ್ನಾಟಕದ ಎಲ್ಲ ಜನಪದ ಕಲೆಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸುವ 'ಕರ್ನಾಟಕ ಜಾನಪದ ಕಲೆಗಳು' ಎಂಬ ಗ್ರಂಥ ಎರಡು ಸಂಪುಟಗಳಲ್ಲಿ

ಪ್ರಕಟವಾದ 'ಜಾನಪದ ವಿಶ್ವಕೋಶ', ಕನ್ನಡ ರಾಜ್ಯೋತ್ಸವದ ಬೆಳ್ಳಿಹಬ್ಬದ ಅಂಗವಾಗಿ ಹಾಕಿಕೊಂಡ ಬೆಳ್ಳಿ ಬಿಟ್ಟ ಬಳ್ಳಿ ಎಂಬ ಮಾಲೆಯಲ್ಲಿ ನೂರಾರು ಜನಪದ ಗ್ರಂಥಗಳ ಪ್ರಕಟಣೆ ಇವೇ ಮೊದಲಾದವನ್ನು ಇಲ್ಲಿ ಹೆಸರಿಸಬಹುದು. ಜನಪದ ಸಂಶೋಧನಾ ಗ್ರಂಥಗಳಲ್ಲಿ ಅನೇಕವು ಕನ್ನಡ ಸಾಹಿತ್ಯ ಪರಿಷತ್ತಿನ ವತಿಯಿಂದ ಪ್ರಕಟಗೊಂಡು ಜಾನಪದ ಆಸಕ್ತರಿಗೆ ಲಭ್ಯವಾಗಿವೆ. ಕನ್ನಡ ಸಾಹಿತ್ಯ ಪರಿಷತ್ತು ನಡೆಸುವ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿಯೂ ಕೂಡ ಜಾನಪದ ವಿಚಾರಗೋಷ್ಠಿಗಳನ್ನು ನಡೆಸುವ ಮೂಲಕ ಜಾನಪದಕ್ಕೆ ಸಲ್ಲಬೇಕಾದ ಮಾನ್ಯತೆಯನ್ನು ಪರಿಷತ್ತು ನೀಡುತ್ತಿದೆ.

ಜನಪದ ಸಾಹಿತ್ಯ, ಕಲೆ ಕಲಾವಿದರಿಗೆ ಪ್ರೋತ್ಸಾಹ ಮತ್ತು ಸಂರಕ್ಷಣೆಗಳಿಗೆ ಸರ್ಕಾರದ ಆಶ್ರಯವಿರಬೇಕು ಎಂಬ ಕಾರಣದಿಂದಾಗಿ ಕರ್ನಾಟಕ ಮತ್ತು ಯಕ್ಷಗಾನ ಅಕಾಡೆಮಿ ೧೯೮೦ರಲ್ಲಿ ಸ್ಥಾಪಿತವಾಯಿತು. ಅಜ್ಞಾತ ಕಲಾವಿದರಿಗೆ ಪ್ರಶಸ್ತಿ, ಬಡ ಕಲಾವಿದರಿಗೆ ಮಸಾಶನ, ಗೌರವ ಧನ, ವಾದ್ಯ ವಿಶೇಷ ವೇಷಭೂಷಣಗಳಿಗೆ ಧನಸಹಾಯ, ಅಶಕ್ತ ಕಲಾವಿದರಿಗೆ ವೈದ್ಯಕೀಯ ನೆರವು, ನಾಡಿನಾದ್ಯಂತ ನೂರಾರು ಜನಪದ ಕಲಾಮೇಳಗಳು, ವಿಚಾರಗೋಷ್ಠಿಗಳು, ಕಮ್ಮಟಗಳು, ತರಬೇತಿ ಶಿಬಿರಗಳು, ಶಿಷ್ಯವೇತನ ನೀಡಿಕೆ ಮೊದಲಾದ ಅತ್ಯಮೂಲ್ಯ ಕೆಲಸಗಳು ಅಕಾಡೆಮಿಯಿಂದ ನಡೆಯುತ್ತಿವೆ.

ನಾಡಿನ ಸಂಸ್ಕೃತಿಯ ಜೀವನಾಡಿಯಾದ ಜಾನಪದ ಸಂಸ್ಕೃತಿಯನ್ನು ಸಂರಕ್ಷಿಸಿ ಬೆಳೆಸುವ ಮಹಾಧ್ಯೇಯದೊಂದಿಗೆ ಕರ್ನಾಟಕ ಜಾನಪದ ಪರಿಷತ್ತು ಎಂಬ ಸಂಸ್ಥೆಯನ್ನು ಎಚ್.ಎಲ್. ನಾಗೇಗೌಡರು ಸ್ಥಾಪಿಸಿದರು.[೨] ಜಾನಪದ ಅಕಾಡೆಮಿಗೂ ಮೊದಲೇ ಸ್ಥಾಪಿತವಾದ ಈ ಸಂಸ್ಥೆ, ಜಾನಪದದ ಮುಖ್ಯವಾಗಿ ಜನಪದ ಕಲೆಗಳ ಸಂರಕ್ಷಣೆಯ ದಿಸೆಯಲ್ಲಿ ಇದುವರೆಗೆ ಮಾಡಿರುವ ಕೆಲಸ ಅಗಾಧವಾದದ್ದು. ಜನಪದ ಕಲೆಗಳ ಪ್ರದರ್ಶನಕ್ಕೆ ಸೂಕ್ತ ನೆಲೆಯ ವ್ಯವಸ್ಥೆ, ಕಲಾವಿದರಿಗೆ ಪ್ರೋತ್ಸಾಹ, ಕಲೆಗಳ ಪುನರುಜ್ಜೀವನ, ಕಲೆಯನ್ನು ಕುರಿತಾದ ಸಂಶೋಧನೆಗೆ ಬೇಕಾಗುವಂತಹ ಮಾಹಿತಿಯನ್ನು ಒಂದೆಡೆಯಲ್ಲಿ ದೊರಕಿಸುವ ವ್ಯವಸ್ಥೆ, ಅಳಿದು ಹೋಗುತ್ತಿರುವ ಜಾನಪದ ಕಲೆಗಳನ್ನು ಗುರ್ತಿಸಿ ದಾಖಲಿಸುವುದು. ಇದೇ ರೀತಿ ನಾಡಿನಾದ್ಯಂತ ಜನಪದ ಕಲೆಗಳ ವೀಡಿಯೋ ದಾಖಲಾತಿ, ಜನಪದ ಕರಕುಶಲ ಕಲೆಗಳಿಗೆ ಸಂಬಂಧಿಸಿದ ವಸ್ತುಗಳನ್ನು ತಯಾರಿಸಿ ಮಾರಾಟದ ಮೂಲಕ ಪ್ರಚಾರ ನೀಡುವುದು, ಆ ಮೂಲಕ ಕಲೆಗಳ ಅಭಿವೃದ್ಧಿಗೆ ಉತ್ತೇಜಿಸುವುದು, ಕಲಾವಿದರ ಜೀವನೋಪಾಯಕ್ಕೆ ದಾರಿ ಒದಗಿಸುವುದು ಇವೇ ಮೊದಲಾದ ಗಮನಾರ್ಹ ಸಾಧನೆಗಳನ್ನು ಪರಿಷತ್ತು ಮಾಡಿದ್ದು, ತನ್ನ ಯೋಜನೆಗಳನ್ನು ದಿನೇ ದಿನೇ ವಿಸ್ತರಿಸಿಕೊಳ್ಳುತ್ತಿದೆ. ಜನಪದ ಸಂಸ್ಕೃತಿಯ ಸತ್ವ, ಸೌಂದರ್ಯ, ವೈವಿಧ್ಯವನ್ನು ಜನತೆಗೆ ಪರಿಚಯ ಮಾಡಿಕೊಡುವ, ಜಾನಪದ ಸಂಶೋಧನೆ ಅಧ್ಯಯನಗಳಿಗೆ ಅವಕಾಶ ಒದಗಿಸುವ ಮುಖ್ಯ ಉದ್ದೇಶದಿಂದ ಜಾನಪದ ಲೋಕ ಎಂಬ ಸ್ಥಳ ವಿಶೇಷವನ್ನೇ ರಾಮನಗರದ ಬಳಿ ನಿರ್ಮಿಸಲಾಗಿದೆ. ಅಪೂರ್ವವಾದ ಜಾನಪದ ವಸ್ತು ಸಂಗ್ರಹಾಲಯವನ್ನು ಒಳಗೊಂಡಿರುವ ಜಾನಪದ ಲೋಕ ಒಂದು ರೋಚಕವಾದ ಪ್ರವಾಸಿ ಸ್ಥಳವೂ ಆಗಿದೆ. ಇದೇ ಜಾನಪದ ಪರಿಷತ್ತಿನ ವತಿಯಿಂದ ಸಿರಿಗಂಧ ಎಂಬ ಕಾರ್ಯಕ್ರಮ ದೂರದರ್ಶನದ ಮೂಲಕ ಪ್ರಸಾರವಾಗುತ್ತಿದೆ. ಇತ್ತೀಚಿನ ದಿನಗಳಲ್ಲಿ ಮರೆಯಾಗುತ್ತಿರುವ ಜಾನಪದ

ಸಂಸ್ಕೃತಿಯ ವಿವಿಧ ಮುಖಗಳನ್ನು ಜನತೆಗೆ ಪರಿಚಯಿಸಿ ಈ ಸಂಸ್ಕೃತಿಯ ಅರಿವನ್ನು ಮೂಡಿಸುವುದೇ ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ.

ಜಾನಪದ ಅಧ್ಯಯನಕ್ಕೆ ಸಂಬಂಧಿಸಿದ ಮಹತ್ತರವಾದ ಕೆಲಸಗಳನ್ನು ಮಾಡುತ್ತಿರುವ ಮತ್ತೊಂದು ಸಂಸ್ಥೆಯೆಂದರೆ ಉಡುಪಿಯ ಎಂ.ಜಿ.ಎಂ. ಕಾಲೇಜಿನ ಆವರಣದಲ್ಲಿ ಸ್ಥಾಪಿತವಾಗಿರುವ 'ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ'[೧೩] (Regional Resources Center for Folk Performing Arts). ಅಮೇರಿಕೆಯ ಫೋರ್ಡ್ ಪ್ರತಿಷ್ಠಾನದ ಉದಾರ ನೆರವಿನೊಂದಿಗೆ ಸ್ಥಾಪಿತವಾದ ಈ ಸಂಸ್ಥೆಯ ಉದ್ದೇಶ ಶ್ರವ್ಯ ದೃಶ್ಯ ಮಾಧ್ಯಮಗಳ ಮೂಲಕ ಜನಪದ ಪ್ರದರ್ಶನ, ಕಲೆಗಳ ದಾಖಲಾತಿ ಹಾಗೂ ಸಂಶೋಧನೆ ನಡೆಸುವುದು, ಕಾರ್ಯಗಾರ, ವಿಚಾರಗೋಷ್ಠಿ ಜನಪದ ಉತ್ಸವಗಳನ್ನು ಕಾಲಾನುಕಾಲಕ್ಕೆ ನಡೆಸಿಕೊಂಡು ಬರುವುದು. ಜಾನಪದದ ಬಗ್ಗೆ ಅರಿವು ಮೂಡಿಸುವುದು. ಇದನ್ನು ಯಶಸ್ವಿಯಾಗಿ ಈ ಸಂಸ್ಥೆ ಮಾಡಿಕೊಂಡು ಬಂದಿದೆ. ಜನಪದ ಗ್ರಂಥಗಳನ್ನು ಕನ್ನಡ ಹಾಗೂ ಇಂಗ್ಲೀಷ್ ಭಾಷೆಗಳೆರಡರಲ್ಲೂ ಪ್ರಕಟಿಸುವ ಮೂಲಕ ಕರ್ನಾಟಕ ಜಾನಪದದ ಬಗ್ಗೆ ವಿದೇಶಿಯರಲ್ಲೂ ಅರಿವು ಮೂಡಿಸುತ್ತಿದೆ. ದಾಖಲಾತಿಗಳು, ಉತ್ತಮ ಗ್ರಂಥಾಲಯ, ಸಂಶೋಧನೆಗೆ ಅಗತ್ಯವಾದ ಇತರೆಲ್ಲ ಸೌಲಭ್ಯಗಳನ್ನು ಒದಗಿಸುವ ಮೂಲಕ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಿದ್ವಾಂಸರಿಗೂ ಈ ಕೇಂದ್ರವು ಒಂದು ಅಮೂಲ್ಯವಾದ ಮಾಹಿತಿ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿದೆ.

ಜಾನಪದ ಅಧ್ಯಯನದ ಬೆಳವಣಿಗೆಯಲ್ಲಿ ಜಾನಪದ ಸಂಬಂಧವಾದ ನಿಯತಕಾಲಿಕೆಗಳೂ ಸಹ ಮಹತ್ವದ ಪಾತ್ರವಹಿಸಿವೆ.[೧೪] ಪಾಶ್ಚಾತ್ಯ ದೇಶಗಳಲ್ಲಿ ಜಾನಪದಕ್ಕೆ ಸಂಬಂಧಿಸಿದಂತೆ ವಿವಿಧ ನಿಯತಕಾಲಿಕೆಗಳಿದ್ದು ಅವುಗಳ ಸಂಖ್ಯೆ ಅಪಾರವಾಗಿದೆ. ಭಾರತದಲ್ಲಿ ಜಾನಪದ ಅಧ್ಯಯನ ಆರಂಭವಾದ ದಿನಗಳಲ್ಲಿ The Indian Antiquary, Asiatic Society Journal, Mythic Society Journal ಮೊದಲಾದವು ಜಾನಪದಕ್ಕೆ ಸೂಕ್ತ ಸ್ಥಾನಮಾನ ನೀಡಿದವು. ಕನ್ನಡದಲ್ಲಿ ಜಾನಪದ ಅಧ್ಯಯನದ ಆರಂಭ ಕಾಲದಲ್ಲಿ ಜಯ ಕರ್ನಾಟಕ, ಪ್ರಬುದ್ಧ ಕರ್ನಾಟಕ, ಸಾಹಿತ್ಯ ಪರಿಷತ್ಪತ್ರಿಕೆ ಮೊದಲಾದವು ಜನಪದ ಸಾಹಿತ್ಯ ಸಂಗ್ರಹ ಮತ್ತು ಲೇಖನಗಳನ್ನು ಪ್ರಕಟಿಸುವ ಮೂಲಕ ಜಾನಪದಕ್ಕೆ ಉತ್ತಮ ಪ್ರಚಾರ ದೊರೆಯಲು ಕಾರಣವಾದವು. ಮಾಸ್ತಿ, ದೇವುಡು, ತೀ.ನಂ.ಶ್ರೀ ಮೊದಲಾದ ವಿದ್ವಾಂಸರೆಲ್ಲರೂ ಈ ಪತ್ರಿಕೆಗಳ ಮೂಲಕ ಜಾನಪದ ಸಂಬಂಧವಾದ ತಮ್ಮ ವಿಚಾರಗಳನ್ನು ಮಂಡಿಸಿದರು.

ಕಲ್ಕತ್ತದಿಂದ ಪ್ರಕಟವಾಗುತ್ತಿದ್ದ Folklore ಎಂಬ ಪತ್ರಿಕೆ ಭಾರತದ ಜಾನಪದ ಕ್ಷೇತ್ರದಲ್ಲಿ ತುಂಬ ಪ್ರಭಾವ ಬೀರಿತು. ಕನ್ನಡದಲ್ಲಿ ಈಗ ಜಾನಪದಕ್ಕಾಗಿಯೇ ಮೀಸಲಾದ ಹಲವಾರು ಪತ್ರಿಕೆಗಳಿದ್ದು ಅವುಗಳಲ್ಲಿ ಕರ್ನಾಟಕದ ಜಾನಪದ ಪರಿಷತ್ತು ಪ್ರಕಟಿಸುತ್ತಿರುವ 'ಜಾನಪದ ಜಗತ್ತು', ಕರ್ನಾಟಕ ಜಾನಪದ ಮತ್ತು ಯಕ್ಷಗಾನದ ಅಕಾಡೆಮಿಯಿಂದ ಪ್ರಕಟವಾಗುವ ಜಾನಪದ ಗಂಗೋತ್ರಿ, ಉಡುಪಿಯ ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರದ ರಂಗಸ್ಥಳ ಮೊದಲಾದವು ಮುಖ್ಯವಾದ ಪತ್ರಿಕೆಗಳು.

ಜಾನಪದ ಜಗತ್ತು ಮತ್ತು ಜಾನಪದ ಗಂಗೋತ್ರಿಗಳು ಜಾನಪದ ಸಂಶೋಧನೆ, ವಿಮರ್ಶೆ, ಮೂಲಸಂಗ್ರಹ ಹಾಗೂ ಅಧ್ಯಯನಗಳಿಗೆ ಮೀಸಲಾದ ಪತ್ರಿಕೆಗಳಾಗಿವೆ. ಇವಲ್ಲದೆ ಅಕಾಡಮಿಯಿಂದ ಜಾನಪದ ಸಮಾಚಾರ ಎಂಬ ದ್ವೈಮಾಸಿಕ ಸುದ್ದಿ ಪತ್ರಿಕೆ ಪ್ರಕಟವಾಗುತ್ತಿದ್ದು ಅಕಾಡೆಮಿಯ ಯೋಜನೆಗಳನ್ನು ಅವುಗಳ ಅನುಷ್ಠಾನಶೀಲತೆಯನ್ನು ಮತ್ತು ಕರ್ನಾಟಕದಲ್ಲಿ ನಡೆಯುವ ಜಾನಪದ ಸಂಬಂಧವಾದ ಮುಖ್ಯ ಪ್ರಯತ್ನಗಳು ಜಾನಪದ ಆಸಕ್ತರಿಗೆ ಪರಿಚಯ ಮಾಡಿಕೊಡುತ್ತಿವೆ. ಉಡುಪಿಯ ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ ಪ್ರಕಟಿಸಿರುವ 'ಪ್ರಸಂಗ' ಎಂಬ ಸುದ್ದಿ ಪತ್ರಿಕೆಯು ಪ್ರಸ್ತುತ ಕೇಂದ್ರವು ಜಾನಪದ ಸಂಬಂಧವಾಗಿ ಕೈಗೊಂಡ ಕ್ಷೇತ್ರಕಾರ್ಯಗಳ ವಿಸ್ತೃತ ಮಾಹಿತಿಯನ್ನು ಪರಿಚಯಾತ್ಮಕ ಬರಹಗಳನ್ನು ಒಳಗೊಂಡ ಒಂದು ಉತ್ತಮ ಮಟ್ಟದ ಪತ್ರಿಕೆಯಾಗಿದೆ.

ಹೀಗೆ ಸಮಕಾಲೀನ ಸಂದರ್ಭದಲ್ಲಿ ಜಾನಪದ ಸಂಘ-ಸಂಸ್ಥೆಗಳು ವಹಿಸುವ ಪಾತ್ರ ಅಮೋಘ ವಾದದ್ದು.

**ಜಾನಪದ ಅಧ್ಯಯನದ ಮುಂದಿನ ಗೊತ್ತುಗುರಿಗಳು**

ಜಾನಪದ ಸಂಗ್ರಹ ವಿಶ್ಲೇಷಣಾತ್ಮಕ ಅಧ್ಯಯನಗಳು ಸಮೃದ್ಧವಾಗಿ ನಡೆದಿವೆಯಾದರೂ ಆಗಿರುವ ಕೆಲಸವೆಲ್ಲವೂ ತೃಪ್ತಿಕರವಾಗಿದೆ ಎನ್ನುವಂತಿಲ್ಲ. ಇಲ್ಲಿನ ಕೆಲಸದಲ್ಲಿ ಶಾಸ್ತ್ರೀಯ ಅರಿವಿನ ಕೊರತೆ ಎದ್ದು ಕಾಣುತ್ತದೆ. ಬಹುತೇಕ ಸಂಗ್ರಹಗಳು ಜಾನಪದದ ವಿವಿಧ ಮುಖಗಳ ಅಧ್ಯಯನಕ್ಕೆ ಪೂರಕವಾಗಿ ಅಗತ್ಯವಾದ ಮಾಹಿತಿಯನ್ನು ಕೊಡಲು ವಿಫಲವಾಗಿವೆ. ಜಾನಪದದ ವಿವಿಧ ಮುಖಗಳಾದ ಜನಪದ ಕಲೆ, ಶಿಕ್ಷಣ, ಸಾಹಿತ್ಯ ಜಾನಪದ ವಸ್ತುಗಳು, ಜಾನಪದ ಗೀತೆಗಳು, ಸಂಗೀತ, ನೃತ್ಯ, ಪ್ರದರ್ಶನಗಳು, ಹಬ್ಬ ಆಚರಣೆಗಳು, ಜಾನಪದ ಉತ್ಸವಗಳು, ಜನಪದ ಕಾವ್ಯಗಳು, ಇನ್ನು ಮುಂತಾದವುಗಳ ಅಧ್ಯಯನಕ್ಕೆ ಅಗತ್ಯವಾಗುವಂತಹ ಪೂರಕ ಮಾಹಿತಿಯೆಲ್ಲವೂ ವ್ಯವಸ್ಥಿತವಾಗಿ ದೊರೆಯುವಂತಾಗಬೇಕು. ಇದಕ್ಕಾಗಿ ಸಂಗ್ರಹಕಾರರಿಗೆ ಒಂದು ಮಾದರಿ ನಮೂನೆಯನ್ನು ರೂಪಿಸಿ ಕೊಡಬೇಕು.

ಸಂಗ್ರಹಕ್ಕೆ ಸಂಬಂಧಿಸಿದಂತೆ ಕೇವಲ ಜಾನಪದ ವಸ್ತುಗಳನ್ನು ಸಂಗ್ರಹಿಸಿದರೆ ಸಂಗ್ರಹ ಕಾರ್ಯ ಮುಗಿಯಿತು ಎಂದುಕೊಳ್ಳುವ ಭಾವನೆಯನ್ನು ದೂರ ಮಾಡಬೇಕಾಗಿದೆ.[39] ಯಾವುದೇ ಒಂದು ಪ್ರಕಾರದ ಸಂಗ್ರಹಣೆ ಎಲ್ಲ ಪ್ರದೇಶಗಳಿಂದಲೂ ಮತ್ತು ಸಾಂಸ್ಕೃತಿಕ ವಲಯಗಳಿಂದಲೂ ಆಗಬೇಕು. ಹೀಗೆ ಮಾಡಿದಾಗ ಜಾನಪದ ವಸ್ತು ವೈವಿಧ್ಯತೆಯನ್ನು ಮತ್ತು ಆಯಾ ಪ್ರದೇಶದ ಸಾಂಸ್ಕೃತಿಕ ವೈಶಿಷ್ಟ್ಯವನ್ನು ತಿಳಿಯುವುದಕ್ಕೂ ಸಾಧ್ಯ.

ಸಂಗ್ರಹಿಸಿದ ಸಾಮಗ್ರಿಯ ವಿಶ್ಲೇಷಣೆಗೆ ಸಂಬಂಧಿಸಿದಂತೆ ಇದುವರೆಗಿನ ವಿಶ್ಲೇಷಣೆಗಳಲ್ಲಿ ಸಾಹಿತ್ಯಕ ದೃಷ್ಟಿಯೇ ಪ್ರಧಾನವಾಗಿತ್ತು. ಆದರೆ ಜನಪದ ಸಾಹಿತ್ಯಕ್ಕೆ ಕೇವಲ ಸಾಹಿತ್ಯಕ ಮಹತ್ವವಷ್ಟೇ ಅಲ್ಲ ಸಾಂಸ್ಕೃತಿಕ ಮಹತ್ವವೂ ಇದೇ. ಈ ಅಂಶವನ್ನು ಮನಗಾಣುವಂತಾಗಲು ಜಾನಪದ ಅಭ್ಯಾಸಿಗಳಿಗೆ

ಮಾನವಶಾಸ್ತ್ರ, ಸಮಾಜಶಾಸ್ತ್ರ, ಭಾಷಾಶಾಸ್ತ್ರ, ಮನೋವಿಜ್ಞಾನ ಮೊದಲಾದ ಸಂಬಂಧಪಟ್ಟ ಶಾಸ್ತ್ರಗಳ ಬಗ್ಗೆ ಸೂಕ್ತ ತರಬೇತಿ ನೀಡುವ ವ್ಯವಸ್ಥೆ ಇರಬೇಕು. ಈ ಶಾಸ್ತ್ರಗಳ ಅರಿವಿಲ್ಲದೆ ನಡೆಸುವಂತಹ ಅಧ್ಯಯನಗಳು ಕೇವಲ ಊಹಾತ್ಮಕವಾಗುತ್ತವೆ.

ಈಗಾಗಲೇ ಅಳಿದುಹೋಗುತ್ತಿರುವ ಜಾನಪದ ವಸ್ತುಗಳು, ಜನಪದ ಕಲೆಗಳು, ಜನಪದ ಶಿಕ್ಷಣ, ರಂಗಭೂಮಿ ಕಲೆಗಳು, ಜನಪದ ಸಾಹಿತ್ಯ, ಸಂಗೀತ, ನೃತ್ಯ, ಪ್ರದರ್ಶನಗಳು, ಜಾನಪದಕ್ಕೆ ಸಂಬಂಧಿಸಿದ ತರಬೇತಿ ಶಿಬಿರಗಳು, ಜಾನಪದ ಕಮ್ಮಟಗಳು, ಸಂಶೋಧನಾ ಕಮ್ಮಟಗಳು, ವಿಚಾರ ಸಂಕಿರಣಗಳು ಮುಂತಾದವುಗಳ ಸಂಗ್ರಹ ಕಾರ್ಯ ತ್ವರಿತ ಗತಿಯಲ್ಲಿ ನಡೆಯಬೇಕು. ಶ್ರವ್ಯ, ದೃಶ್ಯ, ಮುದ್ರಣ ಮೊದಲಾದ ಮಾಧ್ಯಮಗಳಲ್ಲಿ ಅವುಗಳ ವ್ಯವಸ್ಥಿತ ದಾಖಲಾತಿ ನಡೆಯಬೇಕು. ಕರ್ನಾಟಕದ ಹಲವಾರು ಸರ್ಕಾರಿ, ಅರೆಸರ್ಕಾರಿ ಹಾಗೂ ಖಾಸಗಿ ಸಂಘ-ಸಂಸ್ಥೆಗಳು ಇಂತಹ ದಾಖಲಾತಿ ಯೋಜನೆಯನ್ನು ಹಾಕಿಕೊಂಡಿವೆ. ಇದರ ಜೊತೆಗೆ ಆಧುನಿಕ ಜಾನಪದ ಪ್ರಕಾರಗಳ ದಾಖಲಾತಿ ಮತ್ತು ಅಧ್ಯಯನದ ಕಡೆಗೂ ಗಮನಹರಿಸಬೇಕು. ನಗರಗಳನ್ನು ಜಾನಪದ ತಜ್ಞರು ತುಂಬಿ ತುಳುಕುತ್ತಿರುವ ಪ್ರಯೋಗಾಲಯ ಗಳಂತೆ ಪರಿಗಣಿಸಬೇಕು. ಇಲ್ಲಿನ ಜನಾಂಗಿಕ ಔದ್ಯೋಗಿಕ, ಸಮಾಜೋ ಆರ್ಥಿಕ ವೃತ್ತಿ ಗುಂಪುಗಳು ಜಾನಪದ ತಜ್ಞನಿಗೆ ಅಧ್ಯಯನದ ಸಮೃದ್ಧ ಸಾಧ್ಯತೆಗಳನ್ನು ಒದಗಿಸುತ್ತವೆ ಎಂಬ ಡಾರ್ಸನ್ನನ ಮಾತುಗಳನ್ನು ಇಲ್ಲಿ ಗಮನಿಸಬಹುದು.

ಹೀಗೆ ನಾವು ಆಧುನಿಕ ಜಾನಪದದ ಎದೆಯಲ್ಲಿ ವಿದ್ಯಾರ್ಥಿ ಜಾನಪದ, ಕಾರ್ಮಿಕ ಜಾನಪದ, ವಾಹನ ಜಾನಪದ, ಕೈಗಾರಿಕಾ ಜಾನಪದ ಮೊದಲಾದ ಜಾನಪದಗಳನ್ನು ಸಂಗ್ರಹಿಸುವಂತೆಯೇ ಜಾನಪದ ಪ್ರಕಾರಗಳಲ್ಲಾಗುತ್ತಿರುವ ಸ್ಥಿತ್ಯಂತರಗಳ ಕಡೆಗೂ ಗಮನ ನೀಡಬೇಕು.[18] ಉದಾಹರಣೆಗೆ, ನಮ್ಮ ದೇಶದಲ್ಲಿ ಇದುವರೆಗೆ ದಟ್ಟವಾಗಿದ್ದ ಜಾತಿ ಜಾನಪದದ ಪ್ರಕಾರಗಳು ಕ್ರಮೇಣ ಮಸುಕಾಗುತ್ತಿವೆ. ಜಾತಿ ಸಂಬಂಧವಾಗಿ ಹುಟ್ಟಿಕೊಂಡ ಎಷ್ಟೋ ಗಾದೆಗಳು, ಕಥೆಗಳು, ವ್ಯಂಗ್ಯಗಳು ಅರ್ಥ ಕಳೆದುಕೊಳ್ಳುತ್ತಿವೆ. ಇದಕ್ಕೆ ಬದಲಾಗಿ ವೃತ್ತಿ ಜಾನಪದ ಸಮೃದ್ಧವಾಗಿ ಬೆಳೆಯುತ್ತಿದೆ. ಜನಪದ ಕಥೆಗಳ ಪ್ರಕಾರ ಇಂದು ಬೆಳೆಯುತ್ತಿಲ್ಲವಾದರೂ ಐತಿಹ್ಯಗಳ ಪ್ರಕಾರ ಮಾತ್ರ ಬೆಳೆಯುತ್ತಲೇ ಇದೆ. ಹೊಸ ಹೊಸ ವಿಷಯಗಳನ್ನು ಕುರಿತಂತೆ ಐತಿಹ್ಯಗಳು ಹುಟ್ಟಿಕೊಳ್ಳುತ್ತಿವೆ. ಮೊದಲು ಪ್ರಚಲಿತವಿದ್ದ ಹಾಸ್ಯ ಕಥೆಗಳ ಸ್ಥಾನದಲ್ಲಿ ಇಂದು ಚುಟುಕಾದ ನಗೆಹನಿಗಳು, ಹಾಸ್ಯ ವೃತ್ತಾಂತಗಳು ಹುಟ್ಟಿಕೊಂಡಿವೆ. ಹೀಗಾಗಿ ಇವುಗಳನ್ನು ಆಧುನಿಕ ಜಾನಪದದ ಒಂದು ಮುಖ್ಯ ಪ್ರಕಾರವಾಗಿ ಪರಿಗಣಿಸಲಾಗುತ್ತಿದೆ.

ಇದಲ್ಲದೆ ಭಾರತೀಯ ಸಂದರ್ಭದಲ್ಲಿ ನಗರ ಮತ್ತು ಗ್ರಾಮೀಣ ಜನಪದ ಪ್ರಕಾರಗಳ ತುಲನಾತ್ಮಕ ಅಧ್ಯಯನ ಮಾಡಲು ಈಗ ನೆಲೆ ಸಿದ್ಧವಾಗಿದೆ. ಈ ಎರಡೂ ಪ್ರದೇಶಗಳಲ್ಲಿನ ಪ್ರಕಾರಗಳ ಸಾಮ್ಯತೆ, ಗ್ರಾಮೀಣ ಪ್ರದೇಶಗಳ ಮೇಲೆ ನಗರ ಸಂಸ್ಕೃತಿಯ ಪ್ರಭಾವ, ನಗರ ಹಾಗೂ ನಗರ ಸಂಸ್ಕೃತಿಯನ್ನು ಕುರಿತು ಗ್ರಾಮೀಣ ಪ್ರದೇಶದಲ್ಲಿ ಹುಟ್ಟಿಕೊಳ್ಳುತ್ತಿರುವ ಜನಪದ ಸಾಹಿತ್ಯದ ಸ್ವರೂಪ ಇವೇ ಮೊದಲಾದ ಅಂಶಗಳನ್ನು ಅಧ್ಯಯನಿಸಬಹುದು.

ಭಾರತೀಯ ಸಂದರ್ಭದಲ್ಲಿನ ಜಾನಪದ ಅಧ್ಯಯನದಲ್ಲಿ ಮಾತ್ರವೇ ಎದುರಾಗುವಂತಹ ಕೆಲವು ವಿಶಿಷ್ಟ ಸಮಸ್ಯೆಗಳತ್ತ ಗಮನ ಹರಿಸಿ ಪರಿಹರಿಸಿಕೊಳ್ಳುವ ಕೆಲಸವೂ ಈಗ ನಡೆಯಬೇಕಾಗಿದೆ. ಭಾರತೀಯ ಸನ್ನಿವೇಶದಲ್ಲಿ ಜಾತಿ ಧರ್ಮ ಶೀಲ ಲೈಂಗಿಕತೆ ಇವು ಅತ್ಯಂತ ಸೂಕ್ಷ್ಮ ವಿಷಯಗಳಾಗಿದ್ದು ಸ್ವಲ್ಪ ಕೆಣಕಿದರೂ ಅವು ಭಾರೀ ಪ್ರಕ್ಷುಬ್ಧತೆಗೆ ಕಾರಣವಾಗಬಹುದು. ಸ್ವಾರಸ್ಯವೆಂದರೆ ಇಂತಹ ವಿಷಯುಗಳನ್ನು ಕುರಿತೇ ನಮ್ಮಲ್ಲಿ ಅಪಾರವಾದ ಜಾನಪದವಿದೆ. ಜಾನಪದ ಅಧ್ಯಯನದ ಸಂದರ್ಭದಲ್ಲಿ ಈ ಪ್ರಕಾರಗಳನ್ನು ಸಂಗ್ರಹಿಸಿ ಪ್ರಕಟಿಸಿದಾಗ ಅನೇಕ ರೀತಿಯ ವಿರೋಧ ಟೀಕೆಗಳು ವ್ಯಕ್ತವಾದವು. ಇಂತಹ ಅಂಶಗಳ ಪ್ರಕಟಣೆಯಿಂದ ತಮ್ಮ ಜಾತಿಯ ಬಗ್ಗೆ ಕೆಟ್ಟ ಅಭಿಪ್ರಾಯಗಳು ಮೂಡುತ್ತವೆ ಎಂಬ ಕಾರಣದಿಂದ ಆಯಾ ಜಾತಿ ಅಥವಾ ಕೋಮುಗಳವರು ತೀವ್ರ ಪ್ರತಿಭಟನೆ ವ್ಯಕ್ತಪಡಿಸಿದ್ದೂ ಉಂಟು.

ಇಂತಹ ಸಂದರ್ಭದಲ್ಲಿ ಜಾನಪದ ಅಭ್ಯಾಸಿಗಳ ಮುಂದಿರುವ ಪ್ರಶ್ನೆ ಏನೆಂದರೆ ಈ ಜಾನಪದವನ್ನು ಶುದ್ಧ ಶಾಸ್ತ್ರೀಯ ಅಧ್ಯಯನದ ದೃಷ್ಟಿಯಿಂದ ಸಂಗ್ರಹಿಸಿ ಅಧ್ಯಯನಿಸಬೇಕೆ ಅಥವಾ ಅವು ಉಂಟು ಮಾಡಬಹುದಾದ ಅಪಾಯಕಾರಿ ಪರಿಣಾಮಗಳನ್ನು ಗಮನಿಸಿ ವಿಶ್ಲೇಷಣೆಯನ್ನು ಕೈಬಿಡಬೇಕೆ? ಎಂಬುದು.[೨] ಬಹುತೇಕ ಸಂದರ್ಭಗಳಲ್ಲಿ ವಿವಾದಾತ್ಮಕವಾದ ಇಂತಹ ಪ್ರಸಂಗಗಳಿಗೆ ತಲೆ ಹಾಕದೆ ಜಾನಪದ ತಜ್ಞರು ಸುಮ್ಮನಿರಬಹುದಾದರೂ ಈ ಪ್ರಶ್ನೆಗಳಿಗೆ ಸೂಕ್ತ ಸಮಾಧಾನ ಕಂಡುಕೊಳ್ಳುವುದು ಅಗತ್ಯ. ಇಂದು ಜಾನಪದ ತಜ್ಞರಿಗೆ ಮಾತ್ರ ಸಂಬಂಧಿಸಿದ ಸಮಸ್ಯೆಯಾಗಿರದೆ ಮಾನವಶಾಸ್ತ್ರಜ್ಞರು, ಇತಿಹಾಸಕಾರರು, ಮನೋವಿಜ್ಞಾನಿಗಳು, ಸಮಾಜಶಾಸ್ತ್ರಜ್ಞರು ಮೊದಲಾದವರು ಒಟ್ಟುಗೂಡಿ ಚರ್ಚಿಸಬೇಕಾದ ವಿಷಯವಾಗಿದೆ.

ಒಟ್ಟಿನಲ್ಲಿ ಜಾನಪದ ಅಧ್ಯಯನಕ್ಕೆ ಸಂಬಂಧಿಸಿದಂತೆ ನಮ್ಮ ಮುಂದಿರುವ ಗುರಿಗಳನ್ನು ಈ ಕೆಳಕಂಡಂತೆ ಸಂಕ್ಷೇಪಿಸಿ ಹೇಳಬಹುದು.

೧. ನಾವು ನಮ್ಮ ಗ್ರಾಮೀಣ ಜಾನಪದಕ್ಕೆ ಕೊಡುತ್ತಿದ್ದಷ್ಟೇ ಪ್ರಾಮುಖ್ಯತೆಯನ್ನು ಆಧುನಿಕ ಜಾನಪದಕ್ಕೂ ಕೊಡಬೇಕು.

೨. ಒಂದು ಕಾಲದಲ್ಲಿ ಜಾನಪದ ಎಂಬ ಪರಿಕಲ್ಪನೆ ಒಳಗೊಳ್ಳುತ್ತಿದ್ದ ಗ್ರಾಮೀಣವಾದ ಜಾನಪದವನ್ನು ಸರಿಯಾಗಿ ಸಂಗ್ರಹಿಸಬೇಕು. ಅದನ್ನು ಸರಿಯಾದ ನಿಟ್ಟಿನಲ್ಲಿ ಅಧ್ಯಯನಿಸಬೇಕು.

೩. ಆಧುನಿಕ ಪರಿಕಲ್ಪನೆ ಒಳಗೊಳ್ಳುವಂತಹ ಜಾನಪದ ಪ್ರಕಾರಗಳನ್ನು ಗುರುತಿಸಿ ವಿಶ್ಲೇಷಿಸುವುದಕ್ಕೆ ಇದು ಸಕಾಲವೆಂದು ಭಾವಿಸಬೇಕು.

೪. ಕೇವಲ ಸಂಗ್ರಹವಷ್ಟೇ ಜಾನಪದದ ಗುರಿಯಾಗಬಾರದು.

೫. ಸಮಾಜ ಮತ್ತು ಸಂಸ್ಕೃತಿಗಳೊಂದಿಗೆ ಜಾನಪದಕ್ಕಿರುವ ಸಂಬಂಧವನ್ನು ಅರ್ಥ ಮಾಡಿಕೊಂಡು ಅದರ ಅಧ್ಯಯನ ಮಾಡಬೇಕು.

ಈ ಹಿನ್ನೆಲೆಯಲ್ಲಿ ಜಾನಪದ ಅಧ್ಯಯನ ಮುಂದುವರಿದರೆ, ರಾಷ್ಟ್ರಮಟ್ಟದಲ್ಲಿ ಅಂತರ್ ರಾಷ್ಟ್ರಮಟ್ಟದಲ್ಲಿ ಸ್ವಂತಿಕೆಯನ್ನು ಛಾಪಿಸಲು ಸಾಧ್ಯವಾಗುತ್ತದೆ.

## ಸಮಕಾಲೀನ ಸಂದರ್ಭದಲ್ಲಿ ಜಾನಪದ ಲೋಕ

### ಮಾತೃ ಸಂಸ್ಥೆ

ಮಾತೃತ್ವವನ್ನು ಕಳೆದುಕೊಂಡ ನಮ್ಮ ಬದುಕು ಬರಡಾಗುತ್ತದೆ. ಆ ಮಾತೃ ಎಂದರೆ ಜಾನಪದ. ಆಧುನಿಕತೆ ಬಂತೆಂದು ನಾವು ಬೀಗುತ್ತೇವೆ. ಆ ಆಧುನಿಕತೆ ನಮಗೆ ವರವಾಗಿದೆಯೋ, ಶಾಪವಾಗಿದೆಯೋ ಎಂಬುದನ್ನು ಗ್ರಹಿಸುವಲ್ಲಿ ಮೂಢರಾಗಿದ್ದೇವೆ. ಆಧುನಿಕತೆ ಎಂದ ತಕ್ಷಣ ಎಲ್ಲವೂ ಸರಿ ಎಂದು ತಲೆತೂಗುವ ನಾವು ಕೋಲೆ ಬಸವಗಳ ಥರ ಅರಿವಿಲ್ಲದ ಮೂಢರು ಎಂಬುದನ್ನು ಬೇರೆ ಹೇಳಬೇಕಿಲ್ಲ. ತಾಯಿತನ ಇಲ್ಲದ ಬದುಕು ತಬ್ಬಲಿತನ, ಜಾನಪದವನ್ನು ಕಳಕೊಂಡರೆ ನಮ್ಮ ನಾಡಿನಲ್ಲೇ ನಾವು ತಬ್ಬಲಿಗಳಾಗುತ್ತೇವೆ.[೧೮] ನಮ್ಮ ಬೃಹತ್ ಕೈಗಾರೀಕೀಕರಣ, ಕೇಂದ್ರಿಕೃತ ಯೋಜನಾ ವ್ಯವಸ್ಥೆ, ಕೇಂದ್ರೀಕೃತ ಉತ್ಪಾದನಾ ಪದ್ಧತಿಗಳು ಜನಪದರ ಪಾರಸ್ಪರಿಕ ಸಂಬಂಧಗಳನ್ನು ಹಾಳು ಮಾಡುತ್ತಿವೆ. ಇದರಿಂದ ಜನರಲ್ಲಿ ಆಂತರಿಕ ಶಿಸ್ತು, ಧರ್ಮ, ಹೊಂದಾಣಿಕೆ, ಸಹಕಾರಗಳು ಹಾಳಾಗುತ್ತಿವೆ. ಎಲ್ಲೆಲ್ಲೂ ಸಾಮಾಜಿಕ ಗೊಂದಲಗಳು, ರಾಜಕೀಯ ಅರಾಜಕತೆಗಳು ತಲೆದೋರುತ್ತಿವೆ. ಇದಕ್ಕೆಲ್ಲ ಉತ್ತರ ನಮ್ಮ ಲೋಕ ಜಾನಪದ ಲೋಕ ಆಗಬೇಕಾಗಿದೆ.

### ಮೂಢನಂಬಿಕೆಗಳಿಗೆ ಜಾನಪದ ಲೋಕದಲ್ಲಿ ಅವಕಾಶವಿಲ್ಲ

ಎಲ್ಲವೂ ಜಾನಪದವಾಗಬೇಕು ಎಂದಾಗ ನಮ್ಮ ಅಲ್ಪಸಂಖ್ಯಾತರು, ಹಿಂದುಳಿದವರು ಅಸ್ಪೃಶ್ಯರು ನಾವು ಈಗ ಇರುವ ಹಾಗೆಯೇ ಇರಬೇಕಾಗುತ್ತದೇನೋ ಎಂದು ಹೆದರುತ್ತಾರೆ. ಒಂದು ದೃಷ್ಟಿಯಲ್ಲಿ ಅವರ ಹೆದರಿಕೆ ಸರಿ. ಈಗಿರುವ ಮೂಢನಂಬಿಕೆಗಳೆ, ಮೂಢಾನುಸರಣೆಗಳೆ ಜಾನಪದ ಆಗುವುದಾದರೆ ಅವರಿಗೆ ಸಮಸ್ಯೆಗಳು ಇದ್ದೇ ಇವೆ.

ಆದರೆ ಜಾನಪದ ಲೋಕದ ಸೃಷ್ಟಿ ಎಂದರೆ ಮೂಢತೆಗಳನ್ನು ಬೆಳೆಸಿಕೊಂಡು ಜನರನ್ನು ಅಂಧಕಾರದಲ್ಲಿ ಇಡುವುದು ಎಂದು ಅರ್ಥವಲ್ಲ. ಮೂಢನಂಬಿಕೆಗಳನ್ನು ವಿಶ್ಲೇಷಣೆಗಾಗಿ ಮೀಸಲಿಟ್ಟು ಜನಪದರ ಬದುಕಿನ ಸಹಕಾರ ಮನೋಭಾವ, ಸಹಬಾಳ್ವೆ, ಸಹಾಯ ಪ್ರವೃತ್ತಿ, ಉದಾರತೆ, ಸರಸ ಸಲ್ಲಾಪ ಪ್ರವೃತ್ತಿ, ವಿನೋದ ನಡವಳಿಕೆಗಳು ಮುಂತಾದ ಸಾಮಾಜಿಕ ಮತ್ತು ಅನ್ಯೋನ್ಯ ಸಂಬಂಧಗಳನ್ನು ಉಳಿಸಿಕೊಂಡು, ಆಧುನಿಕ ಸಂದರ್ಭದಲ್ಲೂ ಬದುಕು ಮನೋಲ್ಲಾಸವಾಗಿರುವಂತೆ ನೋಡಿಕೊಳ್ಳುವುದು ಜಾನಪದ ಲೋಕದ ಉದ್ದೇಶ ಮತ್ತು ಗುರಿಯಾಗಿದೆ.

### ತಾಯಿ ನೆರಳು ಜಾನಪದ ಲೋಕ

ಇಡೀ ಭಾರತವನ್ನು ಜಾನಪದ ಲೋಕವನ್ನಾಗಿ ಮಾಡಬಹುದು. ಹಾಗೆ ಮಾಡಿದರೆ ಭಾರತಕ್ಕೆ ಸೌಖ್ಯವಿದೆ. ಇದು ಭಾರತವನ್ನು ಆಳುವ ಸರ್ಕಾರದಿಂದ ಮಾತ್ರ ಸಾಧ್ಯ, ಭಾರತ ಸರ್ಕಾರದ ಆಳುವ ನೀತಿ ಮತ್ತು ಆಳಿಸಿಕೊಳ್ಳುವವರ ನೀತಿಗಳು ಭಾರತೀಯ ಪ್ರವೃತ್ತಿಯವುಗಳಾದರೆ ಈ ಕೆಲಸ ತನಗೆ

ತಾನೇ ಸಾಧ್ಯವಾಗುತ್ತದೆ. ಅಂಥ ಒಂದು ಅವಕಾಶ ಭಾರತಕ್ಕೆ ಸಿಕ್ಕರೆ ನಾವೆಲ್ಲ ಸಂತೋಷಪಡೋಣ. ಸದ್ಯಕ್ಕೆ ಕರ್ನಾಟಕ ಜಾನಪದ ಟ್ರಸ್ಟ ವತಿಯಿಂದ ಒಂದು ಮಾದರಿ ಜಾನಪದ ಲೋಕ ಸೃಷ್ಟಿಯಾಗುತ್ತಿದೆ. ಆಧುನಿಕತೆಯ ಬಿಸಿಲು ಬೇಗೆಯಲ್ಲಿ ದುಡಿದು ಬೆಂದವನಿಗೆ ಹೊಂಗೆಯ ತಂಪು. ಹೊಳೆದಡದ ನೆರಳಿನ ಆಹ್ಲಾದ ಸಿಗುವಂತೆ ಜಾನಪದ ಲೋಕ ನಮ್ಮ ಬರಡು ಪದಕ್ಕೆ ಬೇಗೆಗೆ ಸ್ವಲ್ಪವಾದರೂ ತಂಪೆರೆದರೆ ನಾವು ತಾಯಿಯ ಸೆರಗಿನ ನೆರಳಿನಿಂದ ಪಡೆದ ತಂಪಿನಂತೆ ಸುಖವಾಗುತ್ತದೆ."

**ಗ್ರಾಮೀಣ ವಾತಾವರಣದ ಸೃಷ್ಟಿ**

ಜನಪದ ಬದುಕನ್ನು ಪ್ರದರ್ಶನಕ್ಕಾಗಿ, ಕೇಳಿ ತಿಳಿಯುವುದಕ್ಕಾಗಿ ಮಾಡುವ ವ್ಯವಸ್ಥೆ ಒಂದು ರೀತಿಯದು. ಇದು ದಾಖಲಿಸುವ ಪದ್ಧತಿ. ದಾಖಲೆ ಇತಿಹಾಸವಾಗುತ್ತದೆ. ಒಂದು ಕಾಲದ ವಾಸ್ತವತೆಯ ಮೇಲೆ ಬೆಳಕು ಚೆಲ್ಲುತ್ತದೆ. ಎರಡನೆಯ ವ್ಯವಸ್ಥೆ ಜಾನಪದವನ್ನು ಪ್ರಯೋಗಿಕಗೊಳಿಸುವುದು. ಅಂದರೆ ಇವತ್ತಿನ ಬದುಕಿಗೆ ನೆರವಾಗಬಲ್ಲ, ಸ್ಫೂರ್ತಿ ನೀಡಬಲ್ಲ, ಮುಂದಿನ ಬದುಕನ್ನು ನಿರ್ಮಿಸಬಲ್ಲ ಜಾನಪದ ಅಂಶಗಳನ್ನು ಸದಾ ಉಳಿಸುವಂತ ಪ್ರಯತ್ನ. ಈ ಎರಡೂ ಕೆಲಸಗಳಿಗೆ ಜಾನಪದ ಲೋಕ ಅವಕಾಶ ತೆರೆದಿದೆ. ಗ್ರಾಮೀಣ ವಾತಾವರಣ ಕೆಡುತ್ತಿರುವ ಸಂದರ್ಭದಲ್ಲಿ ಗ್ರಾಮಸ್ಥರು ತಾವು ಗ್ರಾಮದ ಜನರೆ ಎಂದು ತಮ್ಮನ್ನು ತಾವೆ ಪ್ರಶ್ನೆ ಮಾಡಿಕೊಳ್ಳಬೇಕಾದ ಸಂದರ್ಭ ಬಂದಿರುವ ಈ ಗಳಿಗೆಯಲ್ಲಿ 'ಜಾನಪದ ಲೋಕ' ಗ್ರಾಮೀಣ ವಾತಾವರಣವನ್ನು ಉಂಟು ಮಾಡಲು ಹೊರಟಿರುವುದು ಒಂದು ಸದುದ್ದೇಶ ಮತ್ತು ಸದೃಢ ಕೆಲಸ ಎಂಬುದರಲ್ಲಿ ಅನುಮಾನವಿಲ್ಲ.

**ಕರಕುಶಲ ವಸ್ತುಗಳ ತಯಾರಿಕೆ**

ಒಂದು ಜನಪದ ಸಂಸ್ಕೃತಿ ತಾನು ಇದ್ದಲ್ಲಿ ಇರುವುದರಿಂದ ಮಹತ್ವವಾದುದೇನನ್ನು ಸಾಧಿಸಿದಂತಾಗುವುದಿಲ್ಲ. ಅದು ತನ್ನನ್ನು ಪರೀಕ್ಷಿಸಿಕೊಳ್ಳಬೇಕು. ಇದು ಇತರ ಸಂಸ್ಕೃತಿಗಳ ಜೊತೆಗೆ ತನ್ನನ್ನು ತಾಳೆ ನೋಡಿಕೊಳ್ಳುವುದು. ಇದು ಯಾವಾಗ ಸಾಧ್ಯ ಎಂದರೆ, ತನ್ನ ಸಾಂಸ್ಕೃತಿಕ ಮಾದರಿಗಳನ್ನು ಹೊರ ಸಂಸ್ಕೃತಿಯ ಮುಂದೆ ಪ್ರದರ್ಶನಕ್ಕೆ ಇಟ್ಟಾಗ, ಅಡವಿಟ್ಟಾಗ ಅಲ್ಲ. ಕೇರಳದಲ್ಲಿ ಕಥಕಳಿ ವೇಷಗಳನ್ನು ಕಾಗದ ಮುಖವಾಡಗಳನ್ನು ಮಾಡುವ ಮೂಲಕ, ಹೊರರಾಜ್ಯ ಮತ್ತು ಹೊರ ನಾಡುಗಳಿಗೆ ಕಳಿಸಿ ತಮ್ಮ ತಮ್ಮ ಕಲಾ ವೈಭವವನ್ನು ಮೆರೆಸುತ್ತಿದ್ದಾರೆ. ಕರ್ನಾಟಕದಲ್ಲಿ ಇಂಥ ಕೆಲಸ ಆಗಿಯೇ ಇಲ್ಲ. ಜಾನಪದ ಲೋಕ ಕರಕುಶಲ ವಸ್ತುಗಳನ್ನು ತಯಾರು ಮಾಡಿ ಮಾರಾಟಕ್ಕೆ ಇಡುವ ಯೋಜನೆ ತುಂಬ ಯೋಗ್ಯವಾದದ್ದು. ಇಂಥ ಜನಪದ ಕಲಾ ಮಾದರಿಗಳು ಬೇರೆ ಬೇರೆ ಜನಾಂಗಕ್ಕೆ ಹೋಗುವುದರಿಂದ ಬೇರೆ ಬೇರೆ ದೇಶದ ಕಲಾವಿದರ ಸಂಪತ್ತು ವೃದ್ಧಿಯಾಗುತ್ತದೆ. ಬಯಲಾಟಗಳ ಮುಖವಾಡಗಳು, ವಾದ್ಯ ವಿಶೇಷಗಳು, ಜನಪದ ಸಂಗೀತ ಮಾದರಿಗಳು ಹೊರ ಜಗತ್ತಿಗೆ ಹೋಗಬೇಕು. ಇದರಿಂದ ವಿಶ್ವ ವ್ಯಾಪಕವಾದ ಜಾನಪದ ಅಧ್ಯಯನ ಮತ್ತು ವಿಶ್ವ ವ್ಯಾಪ್ತಿ ಜಾನಪದ ಸಾಮಗ್ರಿಗಳನ್ನು ಒಳಗೊಳ್ಳಬಹುದಾದ ಸೈದ್ಧಾಂತಿಕ ಧೋರಣೆಗಳು ಹುಟ್ಟುತ್ತವೆ.

## ಮ್ಯೂಸಿಯಂ ಮತ್ತು ಕ್ರೀಡೆಗಳು

ಜಾನಪದ ಸಂಗ್ರಹ, ಪ್ರಕಟಣೆ ಜಾನಪದ ಪ್ರದೇಶದ ಪ್ರಾಥಮಿಕ ಕೆಲಸಗಳಷ್ಟೇ. ನಿಜವಾದ ಜಾನಪದ ಪ್ರದೇಶ ಜಾನಪದ ಕಲೆ, ಕೈಕೆಲಸ, ಕಸಬುಗಳನ್ನು ಕಲಿಯುವುದು, ಕಲಿಸುವ ವ್ಯವಸ್ಥೆ ಮಾಡುವುದು, ಇದು ಆಧುನಿಕ ಕಾಲದಲ್ಲೂ, ಯಾವುದೇ ಕಾಲದಲ್ಲೂ ಜಾನಪದ ಉಳಿಯಲು, ಜಾನಪದ ಬೆಳೆಯುವ ಸಾಧ್ಯತೆಗಳನ್ನು ನಿರ್ಣಯಿಸಿಕೊಳ್ಳಲು ಸಾಧ್ಯವಾಗುತ್ತದೆ. ಜಾನಪದ ಜ್ಞಾನಕೋಣೆ, ಕೊಟ್ಟಿಗೆ ಮತ್ತು ಹಳ್ಳಿಯ ಜ್ಞಾನ ಮಾತ್ರವಲ್ಲ, ವಿಶ್ವಮಾನವ ನೈಸರ್ಗಿಕ ತುಡಿತಕ್ಕೆ ಸ್ಪಂದಿಸಿ ಸೃಷ್ಟಿಸಿ ಕೊಂಡು ಬಂದ ಸರ್ವತ್ರ ಅನ್ವಯಿಕ ಜ್ಞಾನ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.[೨೦] ಜಾನಪದ ಲೋಕ ಈ ನಿಟ್ಟಿನಲ್ಲಿ ಜನಪದ ಕಲೆ, ಕ್ರೀಡೆಗಳಲ್ಲಿ ತರಬೇತಿ ನೀಡುವುದು. ಜಾನಪದ ಬೆಳವಣಿಗೆಗೆ ಕೊಡುವ ದೊಡ್ಡ ಕೊಡುಗೆಯಾಗಿದೆ. ಮ್ಯೂಸಿಯಂ ಜಾನಪದಕ್ಕೆ ಅರ್ಥ ಬರುವುದು, ಮ್ಯೂಸಿಯಂಗಳು ಮಾತಾಡ ತೊಡಗುವುದು ಇಂಥ ಕ್ರಿಯಾತ್ಮಕ ಕೆಲಸಗಳ ಮೂಲಕ ಎಂಬುದನ್ನು ಮರೆಯಲಾಗದು.

## ನಗರದ ಮಕ್ಕಳಿಗೆ ಮತ್ತು ವಿದ್ಯಾರ್ಥಿಗಳಿಗೆ ಜಾನಪದ ಶಿಕ್ಷಣ

ಇವತ್ತಿನ ಶಿಕ್ಷಣಕ್ಕೆ ಜಾನಪದದ ನೇತೃತ್ವ ತುಂಬಾ ಅಗತ್ಯವಿದೆ. ಎಲ್ಲವನ್ನೂ ಇಂಗ್ಲೀಷ್ ಮೂಲಕ ಓದ ಹೊರಡುವ ಮಕ್ಕಳು ಭಾರತೀಯ ವಸ್ತು ಪರಿಸ್ಥಿತಿ ಮತ್ತು ಐತಿಹಾಸಿಕ ಜ್ಞಾನವನ್ನು ಕಳೆದುಕೊಳ್ಳುತ್ತಿದ್ದಾರೆ. ಜಾನಪದದ ಮೊಟ್ಟ ಮೊದಲ ವಿದ್ವಾಂಸ, ಪ್ರಾಕ್ತನಶಾಸ್ತ್ರಜ್ಞ ಫ್ರಾನ್ಸಿಸ್‌ಗ್ರಾಸ್ ಹೇಳುವಂತೆ ಒಂದು ದೇಶದ ಜಾನಪದ ಇತಿಹಾಸವನ್ನು ತಿಳಿಯದವ ರಾಜನೂ ಆಗಲಾರ, ರಾಜಕಾರಣಿಯೂ ಆಗಲಾರ. ವಿದ್ವಾಂಸ, ವಿಚಾರವಂತ, ಸಭ್ಯ ಮತ್ತು ಯೋಗ್ಯ ಆಗುವ ಮಾತಂತೂ ದೂರವೇ ಉಳಿಯುತ್ತದೆ. ಈ ದೃಷ್ಟಿಯಿಂದ ನಮ್ಮ ಆಧುನಿಕ ಶಿಕ್ಷಣ ವ್ಯವಸ್ಥೆ ಯೋಗ್ಯರನ್ನು ತಯಾರು ಮಾಡುವ ಬದಲು ಹಲ್ಲಂಡೆಗಳನ್ನು ತಯಾರು ಮಾಡುತ್ತಿದೆ. ಇದಕ್ಕೆ ಕಾರಣ ಜನಪದ ಸಂಸ್ಕೃತಿಯಲ್ಲಿ ಬೇರು ಬಿಡದ ಶಿಕ್ಷಣ ಮತ್ತು ಶಿಕ್ಷಣಾರ್ಥಿಗಳು. ಭವಿಷ್ಯದ ಇಂಥ ಭಯವನ್ನು ನಿವಾರಿಸಲು ಜನಪದ ಮಾಧ್ಯಮಗಳು, ವಸ್ತುಗಳು, ವಿವರಗಳ ಮೂಲಕ ಮಕ್ಕಳಿಗೆ ಶಿಕ್ಷಣ ನೀಡಬೇಕು. ಜನಪದ ಶಿಕ್ಷಣವೆಂದರೆ ತಾಯಿ ಶಿಕ್ಷಣ, ಬೆರಕೆ ಅಥವಾ ಅಡ್ನಾಡಿ ಶಿಕ್ಷಣವಲ್ಲ. ಇದನ್ನು ಜಾನಪದ ಲೋಕ ಜಾನಪದ ಜಗತ್ತನ್ನು ಮಕ್ಕಳಿಗೆ ಮನಮುಟ್ಟುವಂತೆ ತಲುಪಿಸಲು ಯೋಚಿಸಿರುವುದು ಆರೋಗ್ಯಕರ ಚಿಂತನೆಯಾಗಿದೆ.

ಭಾರತದ ಆಧುನಿಕರಿಗೆ ಸ್ಟಾಂಡರ್ಡ್ ಎಂಬುದೇ ಇಲ್ಲದಿರುವುದರಿಂದ ಅವರು ತಮ್ಮ ತಮ್ಮ ಸ್ಟಾಂಡರ್ಡ್ ಹುಡುಕುತ್ತಾ ಮರಳುಗಾಡಿನಲ್ಲಿ ಅಲೆಯುತ್ತಿದ್ದಾರೆ. ಈ ದುಃಸ್ಥಿತಿ ನಮ್ಮ ನಗರ ಶಾಲಾ ಕಾಲೇಜುಗಳ ವಿದ್ಯಾರ್ಥಿಗಳಿಗೂ ಬಂದಿದೆ. ರಾಗಿ ಮುದ್ದೆ ಉಂಡರೆ ಕಪ್ಪಾಗುತ್ತೇವೆ. ಜೋಳ ತಿಂದರೆ ಸದಾ ಬೇಧಿಯಾಗುತ್ತದೆ. ಹುರುಳಿಕಾಳುಗಳಂತ ಪದಾರ್ಥಗಳನ್ನು ತಿಂದರೆ ನಮ್ಮ ಮರ್ಯಾದೆಯೇ ಹೋಗುತ್ತದೆ ಎಂದು ಬುದ್ಧಿಯನ್ನು ಸವೆಸುತ್ತೇವೆ. ವಾಸ್ತವದಲ್ಲಿ ಆರೋಗ್ಯ ಜನಪದೀಯ ಊಟ ಉಪಚಾರ ಮತ್ತು ಬದುಕುವಿಕೆಯಿಂದ, ಭಾರತದ ಗೌರವ ಇರುವುದು ಭಾರತೀಯ ಜೀವನ ವಿಧಾನಗಳನ್ನು

ಗೌರವಿಸುವುದರಿಂದ ಎಂಬುದನ್ನು ನಗರದ, ಜಗತ್ತನ್ನು ಅರಿಯದ ಸುಂದರ ಕುರುಡರಿಗೆ ತಿಳಿಸಬೇಕಾಗಿದೆ. ಆ ಕಾರಣದ ಮೇಲೆ ಜಾನಪದ ಲೋಕ ನಗರ ವಿದ್ಯಾರ್ಥಿಗಳಿಗೆ ಜಾನಪದ ಬದುಕು ನಡವಳಿಕೆಗಳ ಬಗ್ಗೆ ಶಿಕ್ಷಣ ಕೊಡುವುದು ಉಚಿತವಾದ ಕ್ರಮವಾಗಿದೆ.

'ಮದುವೆಯಾಗದೆ ಹುಚ್ಚು ಬಿಡುವುದಿಲ್ಲ' ಎಂಬ ನಮ್ಮ ಗಾದೆಯಂತೆ ನಗರದವರು ಹಳ್ಳಿಯ ಜನಪದೀಯ ಬದುಕನ್ನು ಅರ್ಥಮಾಡಿಕೊಂಡಲ್ಲದೆ ನಗರಗಳು ಬದುಕುವುದು ಕಷ್ಟವಾಗುತ್ತದೆ. ಅವರು ಭಾರತದ ಬಗ್ಗೆ ಪುಸ್ತಕದಲ್ಲಿ ಓದಿದ್ದು ಭಾರತದ ಬಗ್ಗೆಯ ಅರ್ಧ ಅಥವಾ ಅಲ್ಪಜ್ಞಾನವಾಗುತ್ತದೆ. ಜಾನಪದ ಲೋಕ ಈ ಮೂಲಕ ನಗರದ ವಿದ್ಯಾರ್ಥಿಗಳಿಗೆ ಪೂರ್ಣ ವಿದ್ಯೆಯನ್ನು ಕೊಡಲಿ ಎಂದು ಕೇಳಬಹುದು.

**ಗ್ರಂಥರಚನೆ, ವೀಡಿಯೋ ಚಿತ್ರೀಕರಣ**

ಇತ್ತೀಚಿನ ಕರ್ನಾಟಕ ಜಾನಪದ ಪರಿಸ್ಥಿತಿ ಹದಗೆಟ್ಟಿದೆ. ಜಾನಪದ ಪರಿಸ್ಥಿತಿ ಎಂದರೆ ನಮ್ಮ ವಿದ್ವಾಂಸರೆನಿಸಿಕೊಂಡವರ ಪರಿಸ್ಥಿತಿ. ಕೆಲವು ವಿದ್ವಾಂಸರಂತೂ "ಸೋಮನಹಳ್ಳಿ ಮುದುಕಿಯ ಥರ" ನಮ್ಮ ಕೋಳಿಯಿಂದಲೇ ಬೆಳಕು ಹರಿಯುತ್ತದೆ ಎಂಬಂತೆ ತಮ್ಮ ಉದ್ಧಾರವೇ ಜಾನಪದ ಉದ್ಧಾರ, ತಮ್ಮ ಬಾಲಚೇಲಗಳ ಪ್ರಗತಿಯೇ ಜಾನಪದ ಪ್ರಗತಿ ಎಂದು ತಿಳಿದುಕೊಂಡಿದ್ದಾರೆ. ಈವೊಂದು ಹಿನ್ನೆಡೆಯ ಚಿಂತನಾಗತಿಯಿಂದಲೇ ಜಾನಪದದ ಬಗ್ಗೆ ಕರ್ನಾಟಕದಲ್ಲಿ ಬಹಳ ಕೆಲಸ ನಡೆದಿದ್ದರೂ ಅದನ್ನು ದಾಖಲಿಸುವ ಕೆಲಸ ನಡೆದಿಲ್ಲ. ಅನೇಕ ಗಂಭೀರ ವಿಷಯಗಳ ಬಗ್ಗೆ ಸಮರ್ಥ ಪ್ರಾತಿನಿಧಿಕ ಕೃತಿಗಳು ಬಂದಿಲ್ಲ.

ಜಾನಪದ ಹೇಗೆ ಜನಪದರ ಬಾಯಲ್ಲಿ ಉಳಿದು ನಮ್ಮ ಪಾಲಿಗೆ ಸಿಗುವುದು ಕಷ್ಟವಾಗುತ್ತಿದೆಯೊ ಜಾನಪದ ಅಧ್ಯಯನ ಕೂಡ ತಿಳಿಯುವವರಿಗೆ ಸಿಗದಂತಾಗಿದೆ. ಅಂಥವುಗಳಲ್ಲಿ ಜಾನಪದ ನಿಘಂಟು ಕೂಡ ಒಂದು. ಅದು ಇಲ್ಲಿಯವರೆಗಿನ ಜಾನಪದ - ಜನಪದ ನಡವಳಿಕೆಯ ಪದಗಳನ್ನು ದಾಖಲಿಸಬೇಕು. ಜಾನಪದ ಲೋಕ ಈ ನಿಟ್ಟಿನಲ್ಲಿ ಯೋಚಿಸಿರುವುದು ಗಮನಾರ್ಹವಾದದ್ದು. ಇದೇ ರೀತಿ ಜಾನಪದದ ಬಗ್ಗೆ ಅಗತ್ಯ ತಿಳಿದುಕೊಳ್ಳಬೇಕಾದ ಪ್ರಾಥಮಿಕ ಪಾಠಗಳ ಬಗ್ಗೆ ಕೂಡ ಪುಸ್ತಕಗಳು ಬೇಕು. ಕ್ರಿಯಾತ್ಮಕ ಜಾನಪದವನ್ನು ದಾಖಲಿಸುವ ವೀಡಿಯೋ ಚಿತ್ರೀಕರಣಬೇಕು. ಇದರಿಂದ ಪುರಾತನ ಕಾಲದಿಂದಲೂ ಬಂದ ಜನಪದಹಾಡು, ಗೀತೆ, ಜನಪದ ಕಲೆಗಳು, ಮುಂತಾದವುಗಳನ್ನು ಇದರಿಂದ ತಿಳಿಯಬಹುದು. ಇವೆಲ್ಲ ಅವಕಾಶಗಳನ್ನು ಜಾನಪದ ಲೋಕ ಪೂರೈಸಿಕೊಡಲು ಹೊರಟಿರುವುದು ಸಂತಸದ ಸಂಗತಿ. ಅದೆಲ್ಲ ಆಗುವಂತೆ ಮಾಡಲು ಕರ್ನಾಟಕದ ಜನತೆ ನೆರವಾಗಬೇಕು.

**ಜನಪದ ಕಲೆಗಳ ತರಬೇತಿ**

ಹಿಂದಿನ ದಿನಗಳಲ್ಲಿ ಜನಪದ ಕಲೆಗಳು ಎಂದರೆ ಎಲ್ಲೆಲ್ಲೂ ಸಂಭ್ರಮ ಸಡಗರ. ಒಂದು ರೀತಿಯಲ್ಲಿ ಹಬ್ಬದ ವಾತಾವರಣ ಏರ್ಪಡುತ್ತಿತ್ತು. ಜನಪದ ಕಲೆಗಳನ್ನು ಪ್ರದರ್ಶಿಸುವವರಿಗೆ ಸಾಕಷ್ಟು

ಗೌರವಾಧಾರಗಳು ಸಿಗುತ್ತಿದ್ದ ಕಾಲವದು. ಯಾವುದೇ ಕಲೆಗೆ ಪ್ರೋತ್ಸಾಹ ಸಿಗುತ್ತಿತ್ತು. ಅವುಗಳನ್ನು ಅಪ್ಪರ ಮಟ್ಟಿಗೆ ಜನರು ಪೋಷಿಸಿಕೊಂಡು ಬರುತ್ತಿದ್ದರು. ಪರಿಸ್ಥಿತಿ ಬದಲಾದಂತೆಲ್ಲಾ ಸಾಕಷ್ಟು ಜನಪದ ಪ್ರದರ್ಶಕ ಕಲೆಗಳು ಕೂಡ ಬದಲಾವಣೆಗಳನ್ನು ಕಂಡವು.[೨೨]

ಜನಪದ ಕಲೆಗಳನ್ನು ಪ್ರದರ್ಶಿಸುತ್ತಿದ್ದ ಬಹುತೇಕ ಜನರು ಇಂದು ಕಲೆಗಳನ್ನು ಪ್ರದರ್ಶಿಸುವುದನ್ನೆ ಬಿಟ್ಟಿದ್ದಾರೆ. ಇಂದಿನ ದಿನಗಳಲ್ಲಿ ನೋಡುವವರು ಸಹ ಕಡಿಮೆ ಎಂದು ಹೇಳಬಹುದು. ಕಾರಣ ಪ್ರಸ್ತುತ ದಿನಗಳಲ್ಲಿ ಚಾಲ್ತಿಯಲ್ಲಿರುವ ಆಧುನಿಕ ಮನರಂಜನಾ ಮಾಧ್ಯಮಗಳಾದ ಸಮೂಹ ಮಾಧ್ಯಮಗಳ ಪ್ರಭಾವ, ತಂತ್ರಜ್ಞಾನದ ಕ್ರಾಂತಿಕಾರಿ ಬದಲಾವಣೆ, ಕಂಪ್ಯೂಟರ್ ಯುಗ ಮುಂತಾದವುಗಳ ಹಾವಳಿ ಜೊತೆಗೆ ಸಾಮಾನ್ಯವಾಗಿ ಜನಪದ ಕಲಾವಿದರು ಬಡವರಾಗಿದ್ದು ಕಲೆಯಿಂದ ಬಂದ ಹಣದಲ್ಲಿ ಜೀವನ ನಡೆಸುವುದು ಕಷ್ಟಕರವಾದದ್ದು. ಹಾಗೂ ಕಲಾವಿದರಿಗೆ ಸರಿಯಾದ ಪೋಷಣೆಗಳು ಸಿಗುತ್ತಿಲ್ಲ ಕಲೆಗಳಿಗೆ ತಕ್ಕ ಸಂಭಾವನೆಯು ದೊರೆಯುತ್ತಿಲ್ಲ. ಆದ್ದರಿಂದ ಪ್ರಸ್ತುತ ದಿನಗಳಲ್ಲಿ ಈ ಕಲೆಗಳ ಮೇಲೆ ತೀವ್ರ ಪೆಟ್ಟು ಬಿದ್ದು ಕಲೆಗಳು ಕ್ಷೀಣಿಸುತ್ತಿವೆ. ಈಗ ಜನಪದ ಕಲೆಗಳನ್ನು ಪ್ರದರ್ಶಿಸುವವರು ವಿರಳವಾಗಿದ್ದು ಇದನ್ನು ನೋಡಿ ಆನಂದಿಸುವವರು ಕೂಡ ಬೆರಳೆಣಿಕೆಯಷ್ಟು ಎಂದು ಹೇಳಬೇಕಾಗುತ್ತದೆ. ಏಕೆಂದರೆ ಇದನ್ನು ನೋಡುವುದು, ಪ್ರದರ್ಶಿಸುವುದು ಕೀಳರಿಮೆ ಎಂದು ಭಾವಿಸುತ್ತಾರೆ. ಇಂತಹ ಕೆಲಸವನ್ನು ಮಾಡುವ ಜವಾಬ್ದಾರಿಯನ್ನು ನಮ್ಮ ಜಾನಪದ ಲೋಕವು ಕೈಗೆತ್ತಿಕೊಂಡಿದೆ. ಇಂದು ಈ ಕೇಂದ್ರದಲ್ಲಿ ನೂರಾರು ಜನಪದ ಕಲಾವಿದರಿಗೆ ತರಬೇತಿಯನ್ನು ನೀಡಲಾಗುತ್ತಿದೆ. ವಿವಿಧ ರೀತಿಯ ಜನಪದ ಕಲೆಗಳ ಬಗ್ಗೆ ತರಬೇತಿಯನ್ನು ನೀಡುವುದು ಇದರ ಮುಖ್ಯ ಉದ್ದೇಶವಾಗಿದೆ. ತರಬೇತಿ ಪಡೆದ ಕಲಾ ತಂಡಗಳನ್ನು ರಾಜ್ಯದ ವಿವಿಧ ಭಾಗಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪ್ರದರ್ಶನ ಮಾಡಲು ಕಳುಹಿಸಿಕೊಡಲಾಗುವುದು. ಆ ಕಲಾ ಪ್ರದರ್ಶನಗಳೆಂದರೆ ಪಟ್ಟದ ಕುಣಿತ, ಪೂಜಾ ಕುಣಿತ, ರಂಗದ ಕುಣಿತ, ಸುಗ್ಗಿ ಕುಣಿತ, ಬೀಸು ಕಂಸಾಳೆ, ಡೊಳ್ಳು ಕುಣಿತ, ಕೋಲಾಟ, ತಮಟೆ ಬಾರಿಸುವುದು ಹೀಗೆ ಇನ್ನು ಮುಂತಾದ ಕಲೆಗಳಲ್ಲಿ ತರಬೇತಿಯನ್ನು ನೀಡಲಾಗುತ್ತಿದೆ.

**ಜಾನಪದ ವಸ್ತುಗಳ ಸಂಗ್ರಹ ಕಾರ್ಯ**

ಸಾವಿರಾರು ವರ್ಷಗಳಿಂದ ರೂಪುಗೊಂಡು ಒಂದು ಅನುಭವ ಜ್ಞಾನದ ಪ್ರತೀಕವಾಗಿರುವ ಸಾಂಸ್ಕೃತಿಕ ಪರಂಪರೆಗಳು ಆಧುನಿಕತೆಯ ದಾಳಿಯಿಂದ ಅವಸಾನದ ಅಂಚಿನಲ್ಲಿವೆ. ಹೀಗೆ ಅಳಿದು ಹೋಗುತ್ತಿರುವ ಪರಂಪರಾಗತ ವಸ್ತು ವಿಶೇಷಗಳನ್ನು ನಮ್ಮ ಮುಂದಿನ ತಲೆಮಾರುಗಳ ಅರಿವಿಗಾಗಿ ಕಾಯ್ದಿಡಬೇಕು ಎಂಬ ಉದ್ದೇಶದಿಂದ ಹಾಗೂ ಆಧುನಿಕತೆಯ ಪರಿಣಾಮವಾಗಿ ಸಾಂಸ್ಕೃತಿಕ ಪರಂಪರೆಗಳು ಬಹಳ ಬೇಗ ಕಣ್ಮರೆಯಾಗುವಂತಹ ಸ್ಥಿತಿಯನ್ನು ತಪ್ಪಿಸಿ ಈ ಪರಂಪರೆಯನ್ನು ನಮ್ಮ ಮುಂದಿನ ತಲೆಮಾರುಗಳಿಗೆ ಕಾಯ್ದಿಡಬೇಕು ಮತ್ತು ಸಾಂಸ್ಕೃತಿಕ ಪರಂಪರೆಯ ಬಗ್ಗೆ ನಮ್ಮ ಅಸಡ್ಡೆ, ಅಜ್ಞಾನ, ಅಂಧಶ್ರದ್ಧೆಗಳ ಫಲವಾಗಿ ಅಮೂಲ್ಯವಾದ ವಸ್ತು ವಿಶೇಷಗಳು ನಮ್ಮ ಕೈಗೆ ಸಿಗದಂತಾಗುತ್ತಿವೆ ಅವುಗಳನ್ನು ಸಂರಕ್ಷಿಸುವುದು ವಸ್ತು ಸಂಗ್ರಹಾಲಯಗಳ ಮುಖ್ಯ ಕರ್ತವ್ಯ.

ಆದಿಮಾನವ ಸ್ಥಿತಿಯ ಕಾಲದಿಂದಲೂ ಮನುಷ್ಯ ತನ್ನ ಅಗತ್ಯಕ್ಕೆ ಬೇಕಾದ ವಸ್ತುಗಳನ್ನು ಸೃಷ್ಟಿಸಿ ಕೊಳ್ಳುತ್ತಾ ಬಂದಿದ್ದಾನೆ. ಅಂದರೆ ಅಡುಗೆಯ ಪಾತ್ರೆ ಸಲಕರಣೆಗಳು, ಬೇಟೆ ಮೀನುಗಾರಿಕೆಯ ಸಾಧನ ಸಲಕರಣೆಗಳು, ಕೃಷಿ ಉಪಕರಣಗಳು, ಉಡುಗೆ ತೊಡುಗೆ, ಒಡವೆಗಳು, ಆಯುಧಗಳು, ಮಕ್ಕಳ ಆಟಿಕೆಯ ವಸ್ತುಗಳು, ನೇಯ್ಗೆ, ಕುಂಬಾರಿಕೆ, ಕಮ್ಮಾರಿಕೆ ಮೊದಲಾದ ವೃತ್ತಿಸಾಧನ ಸಲಕರಣೆಗಳು, ಪೂಜಾ ವಸ್ತುಗಳು, ಗೊಂಬೆಗಳು, ವಾದ್ಯಗಳು, ನಾಣ್ಯಗಳು, ಮುಖವಾಡಗಳು, ವಿಗ್ರಹಗಳು, ಇತ್ಯಾದಿಯಾಗಿ ಮನುಷ್ಯ ಸೃಷ್ಟಿಸಿದ ವಸ್ತುಗಳು ಪರಂಪರೆಯ ಮುದ್ರೆಯನ್ನು ಪಡೆದಿರುತ್ತವೆ. ಕಾಲಕ್ಕೆ ತಕ್ಕಂತೆ ಇವುಗಳ ತಯಾರಿಕೆಗೆ ಬಳಸುವ ಸಾಮಗ್ರಿ ಹಾಗೂ ರೂಪ ವಿನ್ಯಾಸಗಳಲ್ಲಿ ಮಾರ್ಪಾಟುಗಳಾಗಬಹುದು. ಎಷ್ಟೋ ವಸ್ತುಗಳು ಉಪಯೋಗವಿಲ್ಲದವೂ ಆಗಬಹುದು. ಇಂಥ ಎಲ್ಲ ವಸ್ತುಗಳನ್ನು ಸಂಗ್ರಹಿಸಿ, ಅವುಗಳನ್ನು ದಾಖಲಿಸಿ, ಶಾಸ್ತ್ರೀಯವಾಗಿ ಇಡುವ ಕೆಲಸವನ್ನು ಇಂದು ಜಾನಪದ ಲೋಕವು ಮಾಡುತ್ತಿದೆ.

ತಮ್ಮಲ್ಲಿರುವ ಅಪೂರ್ವ ಸಾಂಸ್ಕೃತಿಕ ಮಹತ್ವವುಳ್ಳ ಗ್ರಾಮೀಣ ವಸ್ತು ವಿಶೇಷಗಳನ್ನು ವಸ್ತು ಸಂಗ್ರಹಾಲಯಕ್ಕೆ ಕೊಡುಗೆಯಾಗಿ ನೀಡಬೇಕೆಂದು ಜಾನಪದ ಲೋಕವು ಸಾರ್ವಜನಿಕರನ್ನು ವಿನಂತಿಸಿಕೊಳ್ಳುತ್ತದೆ.

## ಸಾಂಸ್ಕೃತಿಕ ಕಾರ್ಯಕ್ರಮಗಳು

ಜಾನಪದ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳು ಬಹುಮುಖ್ಯ ವಾದವು. ಇಂದು ಜನರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮರೆತು ಆಧುನಿಕವಾದ ಬದುಕಿನಲ್ಲಿ ತಲ್ಲೀನರಾಗಿದ್ದಾರೆ. ಸಾಂಸ್ಕೃತಿಕ ಆಚರಣೆಗಳಾದ ಹಬ್ಬ ಆಚರಣೆಗಳು, ಉತ್ಸವಗಳು, ಕಲಾ ಪ್ರದರ್ಶನಗಳು, ಜಾತ್ರೆಗಳು, ಸಂಗೀತ ಶಿಬಿರಗಳು, ಮುಂತಾದವುಗಳನ್ನು ಉಳಿಸಿ ಬೆಳೆಸುವಲ್ಲಿ ಜಾನಪದ ಲೋಕದ ಪಾತ್ರ ಅಮೋಘವಾದದ್ದು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ -

## ಲೋಕೋತ್ಸವ ಕಾರ್ಯಕ್ರಮ

ಜಾನಪದ ಲೋಕವು ಭಾರತದಲ್ಲಿಯೇ ಅಪರೂಪದ, ಅಪೂರ್ವ ವೈಶಿಷ್ಟ್ಯಗಳಿಂದ ಕೂಡಿದ ರಚನೆ ಎನಿಸಿದೆ. ಜನಪದರ ಬದುಕಿನ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಸಂಬಂಧಗಳನ್ನು ಉಳಿಸಿ ಕೊಂಡು ಆಧುನಿಕ ಸಂದರ್ಭದಲ್ಲೂ ಬದುಕು ಉಲ್ಲಾಸದಿಂದ ಕೂಡಿರುವಂತೆ ನೋಡಿಕೊಳ್ಳುವುದೇ ಜಾನಪದ ಲೋಕದ ಉದ್ದೇಶ ಮತ್ತು ಗುರಿಯಾಗಿರುತ್ತದೆ. ಪ್ರತೀ ವರ್ಷ ಫೆಬ್ರುವರಿ-ಮಾರ್ಚ್ ತಿಂಗಳಿನಲ್ಲಿ ಜಾನಪದ ಲೋಕದಲ್ಲಿ ಲೋಕೋತ್ಸವವನ್ನು ಯುಗಾದಿ ಆಸುಪಾಸಿನಲ್ಲಿ ಅದ್ದೂರಿಯಿಂದ ಆಚರಿಸಲಾಗುತ್ತದೆ.[೨] ಎರಡು ಮೂರು ದಿನಗಳ ಕಾಲ ಲೋಕೋತ್ಸವದ ಹೆಸರಿನಲ್ಲಿ ನಡೆಯುವ ಈ ಸಾಂಸ್ಕೃತಿಕ ಸಮಾರಂಭದಲ್ಲಿ ಕರ್ನಾಟಕದ ನಾನಾ ಭಾಗಗಳಿಂದ ಜನಪದ ಕಲಾವಿದರು ಬಂದು ತಮ್ಮ ಕಲಾಪ್ರದರ್ಶನವನ್ನು ನೀಡಿ ಸಂತಸವನ್ನು ಹಂಚಿಕೊಳ್ಳುತ್ತಾರೆ. ಹಾಗೂ ಹೊರ ರಾಜ್ಯಗಳ ಅತ್ಯಂತ

ವಿಶಿಷ್ಟ ರೀತಿಯ ಜನಪದ ಕಲೆಗಳ ಪ್ರದರ್ಶನಗಳು ಹಾಗೂ ಹಾಡುಮೇಳಗಳು, ಕಸರತ್ತು ಚಮತ್ಕಾರಗಳ ಪ್ರದರ್ಶನ ನೀಡಲಾಗುವುದು. ಇವುಗಳ ಜೊತೆಗೆ ಡೊಳ್ಳು ಕುಣಿತ, ಪೂಜಾ ಕುಣಿತ, ಪಟ್ಟದ ಕುಣಿತ, ತಮಟೆ ಬಾರಿಸುವುದು ಇವುಗಳ ಪ್ರದರ್ಶನ, ಜೊತೆಗೆ ಚೌಡಿಕೆ ಪದಗಳು, ಸೋಬಾನೆ ಪದಗಳು, ಜನಪದ ಗೀತೆಗಳು, ಲಾವಣಿ ಹಾಡುಗಳು ಮುಂತಾದ ಹಾಡುಗಳು, ನೃತ್ಯ ನಾಟಕ ಪ್ರದರ್ಶನವನ್ನು ಮಾಡಲಾಗುತ್ತದೆ.

ಒಟ್ಟಿನಲ್ಲಿ ಒಂದು ಹಬ್ಬದ ವಾತಾವರಣವೇ ಸೃಷ್ಟಿಯಾಗಿ ಬಿಡುತ್ತದೆ. ನೂರಾರು ಜನಪದಾಶಕ್ತರು ಇಲ್ಲಿಗೆ ಬಂದಿರುತ್ತಾರೆ. ಮತ್ತು ಜನಪದ ವಿದ್ವಾಂಸರು, ಗಣ್ಯ ವ್ಯಕ್ತಿಗಳು ಉತ್ಸವದಲ್ಲಿ ಭಾಗಿಯಾಗಿರುತ್ತಾರೆ. ಈ ಸಂದರ್ಭದಲ್ಲಿ ರಾಜ್ಯದ ನಾನಾ ಭಾಗಗಳಿಂದ ಬಂದು ಕಲಾ ಪ್ರದರ್ಶನ, ಹಾಡು, ನೃತ್ಯ ಮಾಡಿದ ಕಲಾವಿದರುಗಳಿಗೆ ಈ ಕೆಳಗಿನ ಪ್ರಶಸ್ತಿಗಳನ್ನು ನೀಡಲಾಗುವುದು.

**ಸೋಬಾನೆ ಚಿಕ್ಕಮ್ಮ ಪ್ರಶಸ್ತಿ**

ಕನ್ನಡ ನಾಡಿನ ಜನಪದ ಹಾಡುಗಾರ್ತಿ ಸೋಬಾನೆ ಚಿಕ್ಕಮ್ಮನ ಹೆಸರಿನಲ್ಲಿ ಲೋಕೋತ್ಸವದ ಸಂದರ್ಭದಲ್ಲಿ ಕನ್ನಡ ನಾಡಿನ ಅತ್ಯುತ್ತಮ ಜನಪದ ಹಾಡುಗಾರ್ತಿಗೆ ಸೋಬಾನೆ ಚಿಕ್ಕಮ್ಮ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗುತ್ತದೆ.

**ದೊಡ್ಡಮನೆ ಲಿಂಗೇಗೌಡ ಹುಚ್ಚಮ್ಮ ತಾಯಿ ಪ್ರಶಸ್ತಿ**

ಈ ಪ್ರಶಸ್ತಿಯನ್ನು ಜಾನಪದ ದಿಗ್ಗಜ, ನಾಡೋಜ, ನಾಗೇಗೌಡರ ತಂದೆ ತಾಯಿಯ ನೆನಪಿಗಾಗಿ ನಾಡಿನ ಉತ್ಕೃಷ್ಟ ವೃತ್ತಿ ಗಾಯಕರನ್ನು ಗುರುತಿಸಿ ಸನ್ಮಾನಿಸಲಾಗುವುದು.

**ದೊಡ್ಡಮನೆ ಪ್ರಶಸ್ತಿ**

ನಾಗೇಗೌಡರು ಹುಟ್ಟಿ ಬೆಳೆದ ಮನೆಯೇ ದೊಡ್ಡಮನೆ. ಈ ಮನೆಯ ನೆನಪಿಗಾಗಿ ಜನಪದ ರಂಗಭೂಮಿ ಕಲೆಯಲ್ಲಿ ಉತ್ಕೃಷ್ಟ ಭಾಗವತರನ್ನು ಗೌರವಿಸಲು ಈ ಪ್ರಶಸ್ತಿಯನ್ನು ನೀಡಲಾಗುವುದು.

**ಜಾನಪದ ಲೋಕ ಪ್ರಶಸ್ತಿ**

ರಾಜ್ಯದ ನಾನಾ ಭಾಗಗಳಿಂದ ಬಂದು ವಿಶಿಷ್ಟ ಜನಪದ ಕಲಾ ಪ್ರದರ್ಶನ ನೀಡಿ ವಿಜೇತರಾದ ಕಲಾವಿದರಿಗೆ ಜಾನಪದ ಲೋಕ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಗುವುದು.

ಹಿಂದೆ ನಿರ್ಲಕ್ಷ್ಯಕ್ಕೆ ಗುರಿಯಾಗಿದ್ದ ಜನಪದ ಕಲಾವಿದರನ್ನು ಗುರುತಿಸಿ ಪ್ರೋತ್ಸಾಹಿಸುವ, ಗೌರವಿಸುವ, ಸನ್ಮಾನಿಸುವ ಕೆಲಸವನ್ನು ನಾಗೇಗೌಡರು ಮಾಡುತ್ತಿದ್ದರು. ಅದರಂತೆಯೇ ಪ್ರತಿ ವರ್ಷ ಅತ್ಯುತ್ತಮ ಕಲಾವಿದರುಗಳನ್ನು ಆಯ್ಕೆ ಮಾಡಿ ಅವರಿಗೆ ನೆನಪಿನ ಕಾಣಿಕೆ, ನಗದು, ಸೀರೆ, ಪಂಚೆ, ಸನ್ಮಾನ ಪತ್ರಗಳನ್ನಿತ್ತು ಗೌರವಿಸುತ್ತಾ ಬರಲಾಗುತ್ತಿದೆ.

### ಗಾಳಿಪಟ ಉತ್ಸವ

ಜಾನಪದ ಲೋಕದಲ್ಲಿ ಪ್ರತಿ ವರ್ಷ ಜುಲೈ ತಿಂಗಳಲ್ಲಿ ಗಾಳಿಪಟ ಉತ್ಸವವನ್ನು ಆಚರಿಸಿಕೊಂಡು ಬರಲಾಗುತ್ತಿದೆ. ಈ ಗಾಳಿಪಟ ಉತ್ಸವದಲ್ಲಿ ಸ್ಪರ್ಧಿಗಳು ರಾಜ್ಯದ ನಾನಾ ಭಾಗಗಳಿಂದ ಬಂದಿರುತ್ತಾರೆ. ಗಾಳಿಪಟ ಹಾರಿಸುವುದು ಪ್ರಪಂಚದಾದ್ಯಂತ ಕಂಡುಬರುವ ಕಲೆಯಾಗಿದೆ. ಆದರೆ ಬರುಬರುತ್ತಾ ಕಡಿಮೆಯಾಗುತ್ತಿದ್ದ ಈ ಕಲೆಗೆ ನಾಗೇಗೌಡರು ಚಾಲನೆ ನೀಡಿದರು. ಅಂದಿನಿಂದ ಇಂದಿನವರೆಗೂ ಈ ಗಾಳಿಪಟ ಉತ್ಸವವನ್ನು ತಪ್ಪದೇ ಆಚರಿಸಲಾಗುತ್ತಿದೆ. ಈ ಸ್ಪರ್ದೆಯಲ್ಲಿ ರಾಜ್ಯದ ನಾನಾ ಭಾಗಗಳಿಂದ ಸ್ಪರ್ಧಿಗಳು ಭಾಗವಹಿಸುತ್ತಾರೆ. ಅವರಲ್ಲಿ ವಿಜೇತರಾದವರಿಗೆ ಪಾರಿತೋಷಕ ನೀಡಿ ಗೌರವಿಸಲಾಗುವುದು. ಹಾಗೂ ಭಾಗವಹಿಸಿದವರೆಲ್ಲರಿಗೂ ಬಹುಮಾನ ಮತ್ತು ನೆನಪಿನ ಕಾಣಿಕೆ ನೀಡಿ ಗೌರವಿಸಲಾಗುವುದು.

ಕನ್ನಡ ನಾಡಿನ ಗ್ರಾಮೀಣ ಪ್ರದೇಶದಲ್ಲಿ ಬಹು ಜನಪ್ರಿಯವಾಗಿದ್ದ ಗಾಳಿಪಟ ಹಾರಿಸುವ ಕ್ರೀಡೆಯನ್ನು ಜನಪ್ರಿಯಗೊಳಿಸುವ ಸಲುವಾಗಿ ಪ್ರತಿ ವರ್ಷ ಗಾಳಿಪಟ ಉತ್ಸವವನ್ನು ಆಚರಿಸಲಾಗುತ್ತಿದೆ. ಅಲ್ಲಿ ವಿಭಿನ್ನ ರೀತಿಯ ಗಾಳಿಪಟಗಳನ್ನು ನೋಡಬಹುದು.[೨೩] ಅಂದರೆ ಭಾರತದ ಬಾವುಟ, ಗಣಪತಿ, ಗಡಿಯಾರ, ಬಾವಲಿ, ಗುಂಡುಚಕ್ರ, ಬಂಡಿಚಕ್ರ, ಮೀನು, ರಂಗೋಲಿ, ಮನೆ, ಅಗ್ನಿಕ್ಷಿಪಣೆ, ನಕ್ಷತ್ರ, ಗಂಡಭೇರುಂಡ, ವಜ್ರ, ಆಮೆ ಇತ್ಯಾದಿ ನಾನಾ ವಿನ್ಯಾಸದ ಗಾಳಿಪಟಗಳು ಆಗಸದಾಂಗಳದಲ್ಲಿ ಹಾರಾಡುತ್ತವೆ. ಆಕಾಶದ ತುಂಬಾ ಸಂಭ್ರಮದಿಂದ ಅಡ್ಡಾಡುತ್ತಿದ್ದ ಮೋಡಗಳ ಜನತೆಗೆ ಕೆಂಪು, ಹಸಿರು, ನೀಲಿ, ಬಿಳಿ, ಹಳದಿ ಬಣ್ಣದ ಗಾಳಿಪಟಗಳ ಜೋಕಾಲಿ, ಗಾಳಿಪಟಗಳು ಗಾಳಿಯಲ್ಲಿ ತೇಲುತ್ತಿದ್ದಂತೆ ಜನರ ಸಂಭ್ರಮ ಹರ್ಷೋದ್ಗಾರವನ್ನು ನೋಡಲು ಚೆಂದ.

ಇವುಗಳ ಜೊತೆಗೆ ವಿವಿಧ ಜನಪದ ಕಲೆಗಳ ಮೆರವಣಿಗೆ ಮತ್ತು ಪ್ರದರ್ಶನ, ತಮಟೆ, ಡೊಳ್ಳಿನ ಮೇಳಗಳ ಸದ್ದು, ನೂರಾರು ಜನರು, ಹೀಗೆ ಅದೊಂದು ರೀತಿಯ ಹಬ್ಬದ ವಾತಾವರಣವೇ ಆಗಿ ಬಿಡುತ್ತದೆ.

### ದಸರಾ ಉತ್ಸವ

ದಸರಾ ಉತ್ಸವವನ್ನು ಜಾನಪದ ಲೋಕದಲ್ಲಿ ದಸರಾ ನಾಡಹಬ್ಬದ ಪ್ರಯುಕ್ತ ಪ್ರತಿ ವರ್ಷ ಅಕ್ಟೋಬರ್ ತಿಂಗಳಲ್ಲಿ ಆಚರಿಸಲಾಗುತ್ತಿದೆ. ಈ ಉತ್ಸವದಲ್ಲಿ ಸ್ಪರ್ಧಿಸಲು ಹಾಗೂ ನೋಡಲು ನಾನ ಭಾಗಗಳಿಂದ ಕಲಾವಿದರು ಹಾಗೂ ಜನರು ನೆರೆದಿರುತ್ತಾರೆ.[೨೪] ವಿಧ ವಿಧವಾದ ಕಲಾತಂಡಗಳು ಇಲ್ಲಿಗೆ ಬರುತ್ತವೆ. ಅವುಗಳೆಂದರೆ ಡೊಳ್ಳಿನ ಕಲಾತಂಡ, ಕೋಲಾಟದ ತಂಡ, ಪೂಜಾ ಕುಣಿತ ತಂಡ, ಪಟ್ಟದ ಕುಣಿತ ತಂಡ, ತಮಟೆ ಬಾರಿಸುವವರು ಇವುಗಳ ಪ್ರದರ್ಶನ, ಜೊತೆಗೆ ಕತ್ತಿವರಸೆ, ದೊಣ್ಣೆವರಸೆ, ಬೆಂಕಿವರಸೆಗಳ ಕಸರತ್ತುಗಳನ್ನು ಹಾಗೂ ಯಕ್ಷಗಾನದ ಪ್ರದರ್ಶನವನ್ನು ನೋಡಬಹುದು.

ಇವುಗಳ ಜೊತೆಗೆ ಮಕ್ಕಳ ಕಲಾ ಪ್ರದರ್ಶನಗಳಾದ ಮಕ್ಕಳ ಬುಗುರಿ, ಚಿನ್ನಿದಾಂಡು, ಆಣೆಕಲ್ಲು ಮತ್ತು ಅಳ್ಳುಗುಣಿ ಮಣೆ, ರಂಗೋಲಿ ಸ್ಪರ್ಧೆ, ಲಗೋರಿ ಸ್ಪರ್ಧೆ, ಚಿನ್ನಿದಾಂಡು ಸ್ಪರ್ಧೆ, ಗೋಲಿಯಾಟ ಇನ್ನು ಮುಂತಾದ ಕ್ರೀಡೆಗಳ ಪ್ರದರ್ಶನ ಮತ್ತು ಸ್ಪರ್ಧೆಗಳನ್ನು ನೋಡಬಹುದು.

ಆ ನಂತರದಲ್ಲಿ ದಸರಾ ಗೊಂಬೆಗಳ ಪ್ರದರ್ಶನವನ್ನು ಕಾಣಬಹುದು. ಉದಾ. ಪಟ್ಟದ ಗೊಂಬೆಗಳು, ರಾಮಾಯಣ ಮಹಾಭಾರತಕ್ಕೆ ಸಂಬಂಧಿಸಿದ ದೃಶ್ಯವಳಿಗಳು, ಹಾವಾಡಿಗ, ಕೀಲು ಕುದುರೆ, ದೇವಾನುದೇವತೆಗಳ ಮದುವೆ, ಸಂಗೀತ ಕಚೇರಿ ಮೊದಲಾದ ಗೊಂಬೆಗಳ ಗುಂಪುಗಳು ಪ್ರೇಕ್ಷಕರ ಮನಸೂರೆಗೊಳ್ಳುತ್ತವೆ.

ಈ ಎಲ್ಲಾ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಆಕರ್ಷಕ ನಗದು ಬಹುಮಾನ, ಪ್ರಶಸ್ತಿ, ಪುರಸ್ಕಾರ ನೀಡಲಾಗುವುದು. ಹಾಗೂ ಭಾಗವಹಿಸಿದ ಎಲ್ಲಾ ಕಲಾವಿದರಿಗೂ ಪ್ರಶಸ್ತಿ ನೀಡಿ ಗೌರವಿಸಲಾಗುವುದು.

ಹೀಗೆ ಗಿಜಿಗುಟ್ಟುವ ಜನರು, ಕಲಾವಿದರು, ಜಾನಪದ ವಿದ್ವಂಸರು, ಗಣ್ಯವ್ಯಕ್ತಿಗಳು, ಜೊತೆಗೆ ಎಲ್ಲೆಲ್ಲೂ ಜನಪದ ಕಲಾವಿದರು ಹಾಡುವುದು, ಕುಣಿಯುವುದು ಇದನ್ನು ನೋಡಿದರೆ ಜಾನಪದ ಲೋಕವು ಅಲಂಕಾರಗೊಂಡಂತೆ ಲವಲವಿಕೆಯಿಂದ ಕಾಣುತ್ತದೆ.

**ಚಿಣ್ಣರ ಲೋಕ**

ಜಾನಪದ ಲೋಕ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಚಿಣ್ಣರ ಮೇಳವು ಒಂದು. ಇಲ್ಲಿ ಮುಖ್ಯವಾಗಿ ಮಕ್ಕಳಿಗೆ ಮುಖವಾಡ ತಯಾರಿಕೆ, ಚಿತ್ರಕಲೆ, ಕುಶಲಕಲೆ, ಮೂಕಾಭಿನಯ, ಜನಪದ ಕುಣಿತ, ನಾಟಕಾಭಿನಯ, ಟೆರ್ರಾಕೋಟ ತಯಾರಿಕೆ, ಹೀಗೆ ಮುಂತಾದ ಕಲೆಗಳ ಪ್ರದರ್ಶನ ಮತ್ತು ತರಬೇತಿ ನೀಡುವುದು ಈ ಚಿಣ್ಣರ ಮೇಳದ ಉದ್ದೇಶವಾಗಿರುತ್ತದೆ. ಈ ಮುಖಾಂತರ ಮಕ್ಕಳಲ್ಲಿ ಜನಪದ ಕಲೆ, ಸಂಸ್ಕೃತಿ, ಸಾಹಿತ್ಯ, ಆಚಾರ ವಿಚಾರಗಳನ್ನು ಉಳಿಸುವ ಕೆಲಸವನ್ನು ಜಾನಪದ ಲೋಕವು ಮಾಡುತ್ತಿದೆ.

**ಜಾನಪದ ಸಂಗೀತ ಕಾರ್ಯಕ್ರಮ**

ಸಂಗೀತ ಕಾರ್ಯಕ್ರಮವನ್ನು ಜಾನಪದ ಲೋಕದಲ್ಲಿ ಪ್ರತಿ ವರ್ಷ ಜುಲೈ ತಿಂಗಳಲ್ಲಿ ಆಚರಿಸಲಾಗುತ್ತದೆ. ಈ ಕಾರ್ಯಕ್ರಮದಲ್ಲಿ ಜಾನಪದ ಸಂಗೀತ, ನೃತ್ಯೋತ್ಸವ, ವೀಣಾ ವಾದನ, ನೃತ್ಯರೂಪಕ ಪ್ರದರ್ಶನಗಳನ್ನು ನೀಡಲಾಗುವುದು. ಈ ಸಂದರ್ಭದಲ್ಲಿ ಹೆಸರಾಂತ ಸಂಗೀತ ವಿದ್ವಾಂಸರನ್ನು ಕರೆಸಿ ತರಬೇತಿ ಮತ್ತು ಪ್ರದರ್ಶನವನ್ನು ನೀಡಲಾಗುವುದು.

ಇದರ ಜೊತೆಗೆ ಸ್ಥಳೀಯರಿಂದ ಬೀಸುವ ಪದಗಳು, ಕುಟ್ಟುವ ಪದಗಳು, ಒಕ್ಕಲುತನದ ಪದಗಳು, ಮದುವೆ ಪದಗಳು, ಶರಣರ ಪದಗಳು, ಭಜನೆ ಪದಗಳು, ಕಥನಗೀತೆಗಳು ಮತ್ತು ಕಥನ ಕಾವ್ಯಗಳು, ಕಂಸಾಳೆ ಪದಗಳು, ಚೌಡಿಕೆ ಪದಗಳು, ಗೊಂದಲಿಗರ ಪದಗಳು, ಗೊರವರ ಪದಗಳು, ನೀಲಗಾರರ ಪದಗಳು, ದೊಂಬಿದಾಸರ ಪದಗಳು, ಗೊಲ್ಲರ ಪದಗಳು, ಹೆಳವರ ಪದಗಳು, ಕಿನ್ನರಿ ಜೋಗಿಗಳ ಪದಗಳು, ಕರಪಾಲದ ಪದಗಳು, ಏಕತಾರಿ ಪದಗಳು, ಗೀಗಿ ಪದಗಳು, ಡೊಳ್ಳಿನ

ಪದಗಳು, ಭಾಗವಂತಿಕೆ ಪದಗಳು, ಅಂಟಿಕೆ ಪಂಟಿಕೆ ಪದಗಳು, ಹಚ್ಚೆ ಪದಗಳು, ಕೋಲಾಟದ ಪದಗಳು, ತತ್ವ ಪದಗಳು, ದೇವರ ಪದಗಳು, ಹೀಗೆ ವಿವಿಧ ಜಾನಪದ ಹಾಡು, ಪದಗಳು, ನೃತ್ಯೋತ್ಸವಗಳ ತರಬೇತಿ ಹಾಗೂ ಪ್ರದರ್ಶನ ನೀಡುವುದನ್ನು ಜಾನಪದ ಲೋಕದಲ್ಲಿ ಕಾಣಬಹುದು. ಇದರಿಂದ ಇವುಗಳನ್ನು ಉಳಿಸಿ ಬೆಳೆಸಿದಂತೆಯೂ ಆಗುತ್ತದೆ. ಪ್ರದರ್ಶನ ಮಾಡಿದಂತೆಯೂ ಆಗುತ್ತದೆ. ಹೀಗೆ ನಾನಾ ಭಾಗಗಳಿಂದ ಬಂದು ತರಬೇತಿ ಪಡೆದು ಪ್ರದರ್ಶನ ನೀಡಿದ ಕಲಾವಿದರಿಗೆ ಬಹುಮಾನ, ಪ್ರಶಸ್ತಿ, ಸೀರೆ, ಪಂಚೆ, ಇತ್ಯಾದಿಗಳನ್ನು ನೀಡಿ ಗೌರವಿಸಲಾಗುವುದು. ಇಂತಹ ಕೆಲಸವನ್ನು ನಮ್ಮ ಜಾನಪದ ಲೋಕವು ಕೈಗೆತ್ತಿಕೊಂಡಿರುವುದು ನಮಗೆಲ್ಲರಿಗೂ ಸಂತೋಷದ ವಿಷಯವಾಗಿದೆ.

**ಜಾನಪದ ಜಗತ್ತು ಪತ್ರಿಕೆ**

ಒಂದು ಕಾಲದಲ್ಲಿ ಸಮೃದ್ಧವಾಗಿದ್ದ ಹಾಗೂ ನಮ್ಮ ಸಂಸ್ಕೃತಿಯ ಪ್ರತೀಕವಾಗಿದ್ದ ಜನಪದ ಗೀತೆ, ಕಲೆ, ಗಾದೆ, ಒಗಟು, ಕಥೆ ಇತ್ಯಾದಿಗಳು ನಾಗರೀಕತೆಯ ತುಳಿತಕ್ಕೆ ಸಿಕ್ಕಿ ಇಂದು ಕಣ್ಮರೆಯಾಗುತ್ತಿವೆ. ಇದನ್ನು ಮನಗಂಡ ಕರ್ನಾಟಕ ಜಾನಪದ ಪರಿಷತ್ತು ಹಲವಾರು ವರ್ಷಗಳಿಂದ ಸಹಸ್ರಾರು ಗಂಟೆಗಳು ಕೇಳಬಹುದಾದಷ್ಟು ಜನಪದ ಗೀತೆಗಳನ್ನು ಧ್ವನಿಮುದ್ರಿಸಿಕೊಂಡಿರುವುದಲ್ಲದೆ, ನೂರಾರು ಗಂಟೆಗಳು ನೋಡಬಹುದಾದಷ್ಟು ಜಾನಪದ ಸಂಸ್ಕೃತಿಯ ವಿವಿಧ ಮುಖಗಳನ್ನು ಚಿತ್ರೀಕರಿಸಿಕೊಂಡಿದೆ. ಹಾಗೂ ದೂರದರ್ಶನದಲ್ಲಿ 'ಸಿರಿಗಂಧ' ಧಾರವಾಹಿಯಾಗಿ ಈಗಾಗಲೇ ಪ್ರಸಾರಗೊಂಡಿದೆ. ಅಲ್ಲದೆ ಜಾನಪದ ಸಂರಕ್ಷಣೆಗಾಗಿಯೇ ಬೆಂಗಳೂರು - ಮೈಸೂರು ಹೆದ್ದಾರಿಯಲ್ಲಿ ರಾಮನಗರದ ಬಳಿ ಬೃಹತ್ ಜಾನಪದ ಲೋಕ ನಿರ್ಮಾಣ ಮಾಡಿದೆ.

'ಜಾನಪದ ಜಗತ್ತು' ಪತ್ರಿಕೆಯು ಜನಪದ ಸಾಹಿತ್ಯ-ಕಲೆ, ಆಚಾರ-ವಿಚಾರ, ಕುಣಿತ-ಮೆರೆತ, ಹಬ್ಬ-ಹರಿದಿನ, ಆರಾಧನೆ-ಸಂಪ್ರದಾಯ, ಕಮ್ಮಟಗಳು, ತರಬೇತಿ ಶಿಬಿರಗಳು, ವಿಚಾರ ಸಂಕಿರಣಗಳು, ಸಂಸ್ಕೃತಿ, ಉತ್ಸವ, ಜಾತ್ರೆ, ವರೈಗೆ ಸಮಗ್ರ ಗ್ರಾಮೀಣ ಸಂಸ್ಕೃತಿಯ ಪ್ರಕಟಣೆಗೆ ಮೀಸಲಾದ ಏಕೈಕ ತ್ರೈಮಾಸಿಕ ಪತ್ರಿಕೆಯಾಗಿದೆ.[೨೫] ಇದು ಹಲವಾರು ವರ್ಷಗಳಿಂದ ಈ ಪತ್ರಿಕೆಯನ್ನು ನಡೆಸಿಕೊಂಡು ಬರುತ್ತಿದೆ. ಮೇಲಾಗಿ ಇಂತಹ ಪತ್ರಿಕೆ ಕರ್ನಾಟಕದಲ್ಲಿ ಬೇರೊಂದಿಲ್ಲ ಎಂದು ತಿಳಿಸಲು ಸಂತೋಷ ವಾಗುತ್ತದೆ. ಮೂರು ತಿಂಗಳಿಗೊಮ್ಮೆ ತಪ್ಪದೆ ಪ್ರಕಟವಾಗುತ್ತಿರುವ ಈ ಪತ್ರಿಕೆಯು ವಿಶೇಷ ಸಂಚಿಕೆಗಳನ್ನು ಆಗಾಗ್ಗೆ ಹೊರತರುತ್ತಿದೆ. ಜಾನಪದ ಪರಿಷತ್ತು ಮತ್ತು ಜಾನಪದ ಲೋಕದಲ್ಲಿ ನಡೆಯುವ ಕಾರ್ಯಕ್ರಮಗಳು ಜೊತೆಗೆ ರಾಜ್ಯದ ನಾನಾ ಭಾಗದ ಜಾನಪದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಈ ಪತ್ರಿಕೆಯ ಮುಖಾಂತರ ತಿಳಿಯಬಹುದು.

**ಶೈಕ್ಷಣಿಕ ಕಾರ್ಯಕ್ರಮಗಳು**

ಜಾನಪದ ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಶೈಕ್ಷಣಿಕ ಕಾರ್ಯಕ್ರಮಗಳು ಪ್ರಮುಖ ಪಾತ್ರ ವಹಿಸುತ್ತವೆ. ಇಂತಹ ಶೈಕ್ಷಣಿಕ ಚಟುವಟಿಕೆಗಳು ಇಂದು ಆಧುನಿಕತೆಯ ಪರಿಣಾಮವಾಗಿ ಕ್ಷೀಣಿಸುತ್ತಾ

ಬಂದಿವೆ. ಇಂತಹವುಗಳನ್ನು ಸಂರಕ್ಷಣೆ ಮಾಡಬೇಕೆಂದು ಜಾನಪದ ಲೋಕವು ಹಲವಾರು ಚಟುವಟಿಕೆಗಳನ್ನು ನಡೆಸುತ್ತಿದೆ. ಅವುಗಳೆಂದರೆ ಮೊದಲನೆಯದಾಗಿ ಜಾನಪದ ಮಹಾವಿದ್ಯಾಲಯ, ಜಾನಪದ ಶಿಕ್ಷಣವನ್ನು ಗ್ರಾಮೀಣ ಹಾಗೂ ನಗರದ ಯುವಕ - ಯುವತಿಯರಿಗೆ ಬೋಧಿಸುವುದು ಹಾಗೂ ಶಿಕ್ಷಣದ ಜೊತೆಗೆ ವಿವಿಧ ಜನಪದ ಕಲೆಗಳಲ್ಲಿ ತರಬೇತಿ ನೀಡುವುದು ಇದರ ಉದ್ದೇಶ. ಎರಡನೆಯದಾಗಿ ಸಂಶೋಧನಾ ಕೇಂದ್ರವಾಗಿ ಕೆಲಸ ಮಾಡುವುದು. ಜಾನಪದದ ಬಗ್ಗೆ ಅಧ್ಯಯನ ಮಾಡಲು, ಸಂಶೋಧನೆ ಮಾಡಲು ಬರುವವರಿಗೆ ಈ ಕೇಂದ್ರವು ನೆರವು ನೀಡುತ್ತದೆ. ಮೂರನೆಯದಾಗಿ ಕಮ್ಮಟಗಳು ಪ್ರಮುಖ ಪಾತ್ರ ವಹಿಸುತ್ತವೆ. ಈ ಕಮ್ಮಟಗಳಲ್ಲಿ ಬಹುಮುಖ್ಯವಾಗಿ ಜನಪದ ಕಲೆ, ಸಾಹಿತ್ಯ, ಜನಪದ ವಸ್ತುಗಳು, ಅವುಗಳ ರಕ್ಷಣೆ, ಜಾನಪದ ಹಾಡು, ಜಾನಪದ ಸಂಶೋಧನೆ ಮುಂತಾದವುಗಳನ್ನು ಕುರಿತು ಚರ್ಚಿಸು ವುದಾಗಿದೆ. ನಾಲ್ಕನೆಯದಾಗಿ ತರಬೇತಿ ಶಿಬಿರಗಳು. ಈ ಶಿಬಿರಗಳ ಮುಖಾಂತರ ವಿವಿಧ ಕಲೆಗಳಲ್ಲಿ ತರಬೇತಿ ಪಡೆಯುವುದು. ಉದಾ. ಗ್ರಾಮೀಣ ಕ್ರೀಡೆಗಳು, ಸಂಗೀತ, ಕಲೆ, ಗೀತಾ ಪ್ರಕಾರಗಳು ಇತ್ಯಾದಿ. ಐದನೆಯದಾಗಿ ವಿಚಾರ ಸಂಕಿರಣಗಳು. ಜಾನಪದ ವಿಚಾರಗಳನ್ನು ವಿಮರ್ಶಾತ್ಮಕವಾಗಿ ವಿವಿಧ ನೆಲೆ ಗಳಲ್ಲಿ ಅಧ್ಯಯನ ಮಾಡಲು ಈ ವಿಚಾರ ಸಂಕಿರಣಗಳು ಸಹಕಾರಿಯಾಗಿವೆ.

### ಎಲ್ಲರ ಸಹಕಾರ ಬೇಕು

ಇಡೀ ಗ್ರಾಮೀಣ ಜನರ ಸಕಲ ಕಲ್ಯಾಣಕ್ಕಾಗಿ ಕೈಗೊಳ್ಳಬಹುದಾದ ಎಲ್ಲಾ ಚಟುವಟಿಕೆಗಳನ್ನು ಈ ಜಾನಪದ ಲೋಕ ಮಾಡುವುದಾಗಿ ತನ್ನ ಯೋಜನೆಯಲ್ಲಿ ಹಾಕಿಕೊಂಡಿದೆ. ಈ ಕೆಲಸ ಬಹಳ ದೊಡ್ಡದು. ಇಲ್ಲಿ ಕೇವಲ ಕೆಲಸ ಮಾಡುವ ಮನಸ್ಸುಗಳು ಇದ್ದರೆ ಸಾಲದು ಆ ಕೆಲಸವನ್ನು ಆಗು ಮಾಡಿಕೊಡುವ ಉದಾರ ಹೃದಯಗಳೂ ಬೇಕು. ಯಾಕೆಂದರೆ ಇಲ್ಲಿ ತಾಂತ್ರಿಕ ಸಮಸ್ಯೆಯೊಂದು ಇದೆ. ಸಮಗ್ರ ಗ್ರಾಮೀಣ ಕಲ್ಯಾಣ ಎಂದ ತಕ್ಷಣ, ಜಾನಪದ ಲೋಕ ಹೊಸ ಸರ್ಕಾರಿ ವ್ಯವಸ್ಥೆಯೊಂದರಂತೆಯೋ, ಹೊಸ ಜಾನಪದರ ಜೀವನ ಚೇತನ ಕೇಂದ್ರವಾಗಿಯೋ ಕೆಲಸ ಮಾಡಬೇಕಾಗುತ್ತದೆ. ಆಲೋಚನೆ ಮತ್ತು ಯೋಜನೆಗಳು ಚೆನ್ನಾಗಿಯೇ ಇವೆ. ಇವುಗಳಿಗೆ ಸಿಗುವ ನೆರವು, ಸಹಕಾರ, ಸಹೃದಯ ಪ್ರೋತ್ಸಾಹ ಬಹಳ ಮುಖ್ಯವಾಗುತ್ತವೆ.

### ಟಿಪ್ಪಣಿಗಳು

೧. ಪ್ರೊ. ಎ.ವಿ. ನಾವಡ, ೧೯೯೯, **ಜಾನಪದ ಅಧ್ಯಯನ-ಸಮಕಾಲೀನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ಪು. ೯೪.

೨. ಪ್ರೊ. ಡಿ. ಲಿಂಗಯ್ಯ, ೧೯೯೭, **ಜಾನಪದ ಜಗತ್ತು**, ಸಂಪುಟ-೧೮, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೨.

೩. ಅದೇ....., ಪು. ೩.

೪. ಯು.ಎಸ್. ರಾಮಣ್ಣ, ೨೦೦೪, **ಜಾನಪದ ವಸ್ತುಸಂಗ್ರಹಾಲಯಗಳು**, ಪ್ರಸಾರಾಂಗ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ, ಪು. ೧೦.

೫. ನಾಗವರ್ಮ ಜಿ.ಎಚ್., ೨೦೦೨, ಬಳ್ಳಾರಿ ಜಿಲ್ಲೆಯ ತೊಗಲು ಗೊಂಬೆಯಾಟ, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ಪು. ೮೭.

೬. ಅದೇ....., ಪು. ೮೮.

೭. ಅದೇ....., ಪು. ೮೯.

೮. ಪ್ರೊ. ಹಿ.ಶಿ. ರಾಮಚಂದ್ರೇಗೌಡ, ೨೦೦೪, ಜಾನಪದ ಗ್ರಹಿಕೆ; ಪರಿಕಲ್ಪನೆ, ಎಂ. ಮುನಿರಾಜು ಇಳಾ ಮುದ್ರಣ ಪ್ರಕಾಶನ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು. ೧೨೯.

೯. ಅದೇ....., ಪು. ೧೩೦.

೧೦. ಅದೇ....., ಪು. ೧೩೧.

೧೧. ಪ್ರೊ. ಡಿ. ಲಿಂಗಯ್ಯ, ಡಾ. ಕೆ.ಆರ್. ಸಂಧ್ಯಾರೆಡ್ಡಿ, ೨೦೦೬, ಜಾನಪದ ಸ್ವರೂಪ ಮತ್ತು ಸಾಹಿತ್ಯ, ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್ ಪ್ರಿಂಟರ್ಸ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೨೯.

೧೨. ಅದೇ....., ಪು. ೧೨೯.

೧೩. ಅದೇ....., ಪು. ೧೩೦.

೧೪. ಅದೇ....., ಪು. ೧೩೧.

೧೫. ಯು.ಎಸ್. ರಾಮಣ್ಣ, ೨೦೦೪, ಜಾನಪದ ವಸ್ತುಸಂಗ್ರಹಾಲಯ, ಪ್ರಸಾರಾಂಗ, ಕುವೆಂಪು ವಿಶ್ವವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ, ಪು. ೧.

೧೬. ಡಾ. ಚಕ್ಕರೆ ಶಿವಶಂಕರ್, ಜಾನಪದ ಜಗತ್ತು, ಸಂಪುಟ-೧೮, ಸಂಯುಕ್ತ ಸಂಚಿಕೆ, ಜುಲೈ ಡಿಸೆಂಬರ್, ೧೯೯೭, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೩.

೧೭. ಪ್ರೊ. ಡಿ. ಲಿಂಗಯ್ಯ, ಜಾನಪದ ಜಗತ್ತು, ಸಂಪುಟ-೨೭, ಸಂಯುಕ್ತ ಸಂಚಿಕೆ, ಜನವರಿ-ಡಿಸೆಂಬರ್, ೨೦೦೬, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೨.

೧೮. ವಿ.ಎನ್. ಶಿವರಾಮು, ಜಾನಪದ ಜಗತ್ತು, ಸಂಪುಟ-೮, ಸಂಚಿಕೆ-೨, ಮಾರ್ಚ್-ಏಪ್ರಿಲ್, ೧೯೮೭, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೧೭.

೧೯. ಅದೇ....., ಪು. ೧೭.

೨೦. ಅದೇ....., ಪು. ೧೮.

೨೧. ನಾಗವರ್ಮ ಜಿ.ಎಚ್., ೨೦೦೨, **ಬಳ್ಳಾರಿ ಜಿಲ್ಲೆಯ ತೊಗಲು ಗೊಂಬೆಯಾಟ**, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ಪು. ೮೮.

೨೨. **ಉದಯವಾಣಿ**, ಜಾನಪದ ಲೋಕೋತ್ಸವ, ಬುಧವಾರ, ೦೬, ಫೆಬ್ರವರಿ-೨೦೦೮.

೨೩. ಎಚ್.ಎಲ್. ನಾಗೇಗೌಡ, **ಜಾನಪದ ಜಗತ್ತು**, ಸಂಪುಟ-೧೨, ಸಂಚಿಕೆ-೩, ಜುಲೈ-ಆಗಸ್ಟ್-ಸೆಪ್ಟೆಂಬರ್, ೧೯೯೧, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ಪು. ೨೩.

೨೪. **ಪ್ರಜಾವಾಣಿ**, ಜಾನಪದ ಸಂಗ್ರಹ, ಅಕ್ಟೋಬರ್ ೧೭, ೨೦೦೩.

೨೫. ಗೊ.ರು. ಚನ್ನಬಸವ, **ಜಾನಪದ ಜಗತ್ತು**, ನವೆಂಬರ್-೧೯೮೧, ಜನವರಿ-೧೯೮೨, ಸಂಯುಕ್ತ ವಿಶೇಷ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು. ಪು. ೨.

• • •

# ಅಧ್ಯಾಯ ೬

## ಸಮಾರೋಪ

ಪ್ರಸ್ತುತ ಅಧ್ಯಯನವು ಜಾನಪದ ಲೋಕವನ್ನು ಕೇಂದ್ರವಾಗಿರಿಸಿಕೊಂಡು ರಚನೆಯಾಗಿದೆ. ಜಾನಪದ ಲೋಕದ ಮಹತ್ವವನ್ನು ಅರಿಯಬೇಕೆಂಬ ಹಂಬಲದ ಹಿನ್ನೆಲೆಯಲ್ಲಿ ಕೈಗೊಂಡ ಪ್ರಸ್ತುತ ಅಧ್ಯಯನದಲ್ಲಿ ನಾಗೇಗೌಡರ ವಿಚಾರದಂತೆಯೇ ಜಾನಪದ ಪರಂಪರೆಯನ್ನು ಉಳಿಸಿ ಬೆಳೆಸಿ ಸಂರಕ್ಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಪುರಾತನಕಾಲದಿಂದಲೂ ಜಾನಪದವು ಬೆಳೆದು ಬಂದಿರುವುದು ನಮ್ಮೆಲ್ಲರಿಗೂ ತಿಳಿದ ವಿಷಯ. ಅದೇ ರೀತಿ ಜಾನಪದ ವಸ್ತು ವಿಶೇಷಗಳನ್ನು ಕಾಪಾಡುವುದು ನಮ್ಮೆಲ್ಲರ ಜವಾಬ್ದಾರಿ ಎಂಬುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ನಾಡಿನ ಸಾಂಸ್ಕೃತಿಕ ಪರಂಪರೆಯಲ್ಲಿ ಜಾನಪದ ಲೋಕಕ್ಕೆ ವಿಶೇಷ ಸ್ಥಾನಮಾನವಿದೆ. ಜಾನಪದ ಲೋಕ ಎಂದಾಕ್ಷಣ ಅನೇಕ ವಿಷಯಗಳು ಸ್ಮರಣೆಗೆ ಬರುತ್ತವೆ. ಗ್ರಾಮೀಣ ಜನರ ಹಳೆಯ ಕಾಲದ ಜಾನಪದ ವಸ್ತುಗಳು, ವೇಷಭೂಷಣಗಳು, ಜನಪದ ಕಲೆಗಳು, ಜನಪದ ನೃತ್ಯ, ತರಬೇತಿ, ಜನಪದ ಪಾಠ ಪ್ರವಚನಗಳು, ಜಾನಪದ ವಸ್ತುಸಂಗ್ರಹಾಲಯ - ಹೀಗೆ ಗ್ರಾಮೀಣ ಜನರ ಜನಪದ ವಸ್ತು ಪರಂಪರೆಗೆ ಸಂಬಂಧಿಸಿದಂತೆ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಜಾನಪದ ಲೋಕಕ್ಕೆ ನಮ್ಮ ಕೊಡುಗೆ ಏನು, ಇಂದಿನ ಆಧುನಿಕ ಪ್ರಪಂಚದಲ್ಲಿ ಜಾನಪದ ಪರಂಪರೆಗಳು ಹೇಗೆ ನಶಿಸುತ್ತಿವೆ, ಅವುಗಳನ್ನು ಉಳಿಸಿ ಬೆಳೆಸಿ, ಸಂರಕ್ಷಿಸಲು ನಾವು ಮಾಡಬೇಕಾದ ಪ್ರಯತ್ನ ಯಾವುದು, ಅದರ ಕೆಲಸ ಕಾರ್ಯಗಳೇನು ಎಂಬುದನ್ನು ಹೇಳುವ ಪ್ರಯತ್ನ ಮಾಡಲಾಗಿದೆ.

ಗ್ರಾಮೀಣ ಜನರಲ್ಲಿ ಬಹಳ ಹಿಂದಿನಿಂದ ನಡೆದುಕೊಂಡು ಬಂದ ಸಾಂಸ್ಕೃತಿಕ ಆಚರಣೆಗಳು ತುಂಬ ಮಹತ್ವವನ್ನು ಪಡೆದುಕೊಂಡಿರುತ್ತವೆ. ಆದರೆ ಇಂದಿನ ಜಾನಪದ ವಸ್ತುಗಳು ಪ್ರದರ್ಶನ, ಕಲೆಗಳು ಮುಂತಾದವುಗಳು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಬದಲಾವಣೆಗಳಾಗುತ್ತಿವೆ. ಇಂತಹ ಸಂಕ್ರಮಣಾವಸ್ಥೆಯ ಸಂದರ್ಭದಲ್ಲಿ ಮೂಲೆಗುಂಪಾಗಿರುವ ಜಾನಪದ ಪರಂಪರೆಯನ್ನು ಉಳಿಸಿ ಬೆಳೆಸಲು ಜಾನಪದ ಲೋಕವು ಹೇಗೆ ಕೆಲಸ ಕಾರ್ಯಗಳನ್ನು ಮಾಡುತ್ತಿದೆ ಎಂಬುದನ್ನು ಕುರಿತಾಗಿ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಇಂದು ಜನಪದ ಕಲೆಗಳು, ಜಾನಪದ ಶಿಕ್ಷಣ, ಜಾನಪದ ವಸ್ತುಸಂಗ್ರಹಾಲಯ ಪ್ರದರ್ಶನ ಇತ್ಯಾದಿಗಳು. ಇಂತಹ ಬದಲಾಗುತ್ತಿರುವ, ಮರೆಯಾಗುತ್ತಿರುವ ಜನಪದ ಸಂಸ್ಕೃತಿಯನ್ನು ಪ್ರಸ್ತುತ ಅಧ್ಯಯನದ ಮೂಲಕ ಬೆಳಕಿಗೆ ತರುವ ಕಾರ್ಯವನ್ನು ಜಾನಪದ ಲೋಕವು ಕೈಗೆತ್ತಿಕೊಂಡಿದೆ.

ಜಾನಪದ ಲೋಕದಲ್ಲಿ ಇಂದಿಗೂ ಪ್ರಸ್ತುತವಾಗಿ ನಡೆಯುವ ಜನಪದ ಕಲೆಗಳು, ಆಚರಣೆಗಳು, ಉತ್ಸವಗಳು, ಪ್ರದರ್ಶನಗಳು, ವಿಚಾರ ಸಂಕಿರಣಗಳು, ಕಮ್ಮಟಗಳು, ತರಬೇತಿ ಶಿಬಿರಗಳು, ಮುಂತಾದ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತಲೇ ಇರುತ್ತವೆ. ಪ್ರಸ್ತುತ ಸಂದರ್ಭದಲ್ಲಿ ಇಂತಹ ವೈಶಿಷ್ಟ್ಯತೆಯನ್ನು ಹೊಂದಿರುವ ಜಾನಪದ ಲೋಕದ ಮಾಹಿತಿಯನ್ನು ಸಂಗ್ರಹಿಸುವುದು ಈ ಅಧ್ಯಯನದ ಮಹತ್ವವಾಗಿದೆ.

ಜಾನಪದ ಲೋಕವು ಮೊದಲು ಸಂಗ್ರಹ ರೂಪದಲ್ಲಿ ಮಾತ್ರ ತನ್ನ ವ್ಯಾಪ್ತಿಯನ್ನು ಹೊಂದಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಜನಪದ ಕಲೆಗಳ ತರಬೇತಿ ಕೇಂದ್ರವಾಗಿ, ಗ್ರಾಮೀಣ ಸಾಂಸ್ಕೃತಿಕ ಕಲಾ ಕೇಂದ್ರವಾಗಿ, ಜಾನಪದ ಮಹಾವಿದ್ಯಾಲಯವಾಗಿ ಜನಪದ ವಸ್ತುಗಳ ಮಾರಾಟ ಸ್ಥಳವಾಗಿ, ಪ್ರವಾಸಿಗರ ಪ್ರವಾಸಿ ಸ್ಥಳವಾಗಿ ಭವ್ಯವಾಗಿ ತಲೆಎತ್ತಿ ನಿಂತಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಪ್ರಸ್ತುತ ಅಧ್ಯಯನವು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಅಧ್ಯಯನವು ಮೊದಲು ಪ್ರಸ್ತಾವನೆ ಯಿಂದ ಪ್ರಾರಂಭವಾಗಿದ್ದು, ನಂತರ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಒಳಗೊಂಡಿದೆ. ಅಲ್ಲದೆ ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ ಮತ್ತು ಮಹತ್ವ ಹಾಗೂ ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ. ಆ ನಂತರದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಗುರುತಿಸಿಕೊಂಡ ಅಧ್ಯಯನ ಕ್ಷೇತ್ರವಾದ ರಾಮನಗರ ಜಿಲ್ಲೆಯ ಸಂಕ್ಷಿಪ್ತ ಪರಿಚಯವನ್ನು ಕೊಡಲಾಗಿದೆ. ಜಾನಪದ ಲೋಕದ ಅರ್ಥ, ಸ್ವರೂಪವನ್ನು ತಿಳಿಸುವುದರ ಜೊತೆಗೆ ಜಾನಪದ ಲೋಕದ ಹುಟ್ಟು ಯಾವಾಗ ಆಯಿತು, ಅದರ ಕಾರಣಕರ್ತರು ಯಾರು, ಯಾವ ಉದ್ದೇಶದಿಂದ ಈ ಸಂಸ್ಥೆ ಉದ್ಭವಿಸಿತು, ಅದು ಹೇಗೆ ಕಾಲಕ್ರಮೇಣವಾಗಿ ಬೆಳವಣಿಗೆಯನ್ನು ಹೊಂದುತ್ತಾ ಬಂದಿದೆ ಎಂಬುದನ್ನು ಸ್ಪಷ್ಟಪಡಿಸುವುದರ ಜೊತೆಗೆ ಜಾನಪದ ಲೋಕದ ರೂವಾರಿಗಳು ಆದಂತದ ಜಾನಪದ ದಿಗ್ಗಜ, ನಾಡೋಜ ಹಾಗೂ ಹಿರಿಯ ಉನ್ನತ ಅಧಿಕಾರಿ ಡಾ. ಎಚ್.ಎಲ್. ನಾಗೇಗೌಡರು ಹಾಗೂ ಜಾನಪದ ಲೋಕದ ನಡುವಿನ ಸಂಬಂಧವನ್ನು ಕುರಿತು ಚರ್ಚಿಸಲಾಗಿದೆ. ಬಳಿಕ, ಜಾನಪದ ಲೋಕದ ವಸ್ತುಸಂಗ್ರಹಾಲಯಗಳನ್ನು ಕುರಿತು ವಸ್ತುಸಂಗ್ರಹಾಲಯಗಳೆಂದರೆ ಏನು? ಅದರ ಮಹತ್ವ, ವಸ್ತುಸಂಗ್ರಹಾಲಯಗಳ ಅವಶ್ಯಕತೆ ಮತ್ತು ಉದ್ದೇಶವನ್ನು ಹೇಳುವುದರ ಮೂಲಕ ಅದರ ಸ್ವರೂಪವನ್ನು ತಿಳಿಸಲಾಗಿದೆ. ಸಂಗ್ರಹಗೊಂಡಂತಹ ವಸ್ತುಗಳನ್ನು ಹೇಗೆ ವಿವಿಧ ವರ್ಗಗಳಾಗಿ ವರ್ಗೀಕರಿಸಲಾಗಿದೆ ಎಂಬುದನ್ನು ತಿಳಿಯುವುದರ ಜೊತೆಗೆ ಅವುಗಳು ಹೇಗೆ ಜಾನಪದ ಲೋಕದಲ್ಲಿ ಪ್ರದರ್ಶನವನ್ನು ನೀಡುತ್ತಿವೆ ಎಂಬುದನ್ನು ವಿವರಿಸುವುದರ ಮೂಲಕ ಅವುಗಳನ್ನು ಸಂರಕ್ಷಣೆ ಮಾಡಲು ಯಾವ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಜಾನಪದ ಲೋಕದ ಶೈಕ್ಷಣಿಕ ಕಾರ್ಯಕ್ರಮಗಳಿಗೆ

ಸಂಬಂಧಿಸಿದಂತೆ ಮಾಹಿತಿಯನ್ನು ಪಡೆಯಲಾಗಿದೆ. ಶೈಕ್ಷಣಿಕ ಅಂಶಗಳಾದ ಜಾನಪದ ಮಹಾವಿದ್ಯಾಲಯ ಇದರ ಕೆಲಸ ಕಾರ್ಯಗಳು, ಜಾನಪದ ಶಿಕ್ಷಣದ ಬಗ್ಗೆ ತಿಳಿಯುವುದು ಹಾಗೂ ಜನಪದ ಕಲಾ ಕೇಂದ್ರದಲ್ಲಿ ವಿವಿಧ ಜನಪದ ಕಲೆಗಳು ಯಾವುವು, ಆ ಕಲೆಗಳು ಹೇಗೆ ಪ್ರದರ್ಶನ ನೀಡುತ್ತಿವೆ, ಇದರಿಂದ ಜನರ ಮೇಲೆ ಯಾವ ಪ್ರಭಾವ ಬೀರಿವೆ ಎಂಬುದನ್ನು ಚರ್ಚಿಸುವುದರ ಮುಖಾಂತರ ಜಾನಪದ ಸಂಶೋಧನಾ ಕೇಂದ್ರವಾಗಿ ಜಾನಪದ ಲೋಕ ಹೇಗೆ ಸಂಶೋಧನಾ ಕೆಲಸದಲ್ಲಿ ನಿರತವಾಗಿದೆ ಎಂಬುದನ್ನು ತಿಳಿಯಲಾಗಿದೆ. ಜೊತೆಗೆ ಜಾನಪದ ಲೋಕದಲ್ಲಿ ನಡೆಯುವ ಕಮ್ಮಟಗಳು ಹೇಗೆ ನಡೆಯುತ್ತವೆ? ಈ ಕಮ್ಮಟದಲ್ಲಿ ಜನಪದಕ್ಕೆ ಸಂಬಂಧಿಸಿದಂತೆ ಯಾವ ವಿಷಯಗಳನ್ನು ಕುರಿತು ಚರ್ಚಿಸುತ್ತಾರೆ, ಅದರಿಂದ ಯಾವ ಪ್ರಯೋಜನವಾಗುತ್ತಿದೆ ಎಂಬುದನ್ನು ಅರಿಯುವುದು. ಅಲ್ಲೇ ನಡೆಯುವ ವಿಚಾರ ಸಂಕಿರಣಗಳು ಮತ್ತು ತರಬೇತಿ ಶಿಬಿರಗಳು ಜಾನಪದದ ಮೇಲೆ ಹೇಗೆ ಪ್ರಭಾವ ಬೀರುತ್ತಿವೆ. ಈ ಚರ್ಚೆ ಶಿಬಿರಗಳಿಂದ ಜನರಿಗೆ ಪ್ರಯೋಜನವಾಗುತ್ತಿದೆಯೇ? ಎಂಬುದನ್ನು ಕುರಿತು ಇಲ್ಲಿ ತಿಳಿಸಲಾಗಿದೆ.

ನಂತರದಲ್ಲಿ ಸಮಕಾಲೀನ ಸಂದರ್ಭ ಮತ್ತು ಜಾನಪದ ಲೋಕವನ್ನು ಕುರಿತಂತೆ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಯನವು ಸಮಕಾಲೀನ ಸಂದರ್ಭದಲ್ಲಿ ಜಾನಪದ ಲೋಕ ಹೇಗೆ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದೆ. ವರ್ತಮಾನದಲ್ಲಿ ಅದರ ಸ್ಥಾನಮಾನ ಕುರಿತು ಹೇಳುವುದರ ಮುಖಾಂತರ ಆಧುನಿಕತೆ ಇದರ ಮೇಲೆ ಹೇಗೆ ತನ್ನ ಪ್ರಭಾವವನ್ನು ಬೀರಿದೆ ಎಂಬುದನ್ನು ಕುರಿತಂತೆ ಚರ್ಚಿಸಲಾಗಿದೆ. ಇವತ್ತಿನ ಆಧುನಿಕ ಯುಗದಲ್ಲಿ ಜನಪದ ವಸ್ತುಗಳು, ಕಲೆಗಳು, ಶಿಕ್ಷಣ, ಪ್ರದರ್ಶನ ಇನ್ನೂ ಮುಂತಾದವುಗಳು ನಾಶವಾಗಲು ಕಾರಣವೇನು? ಇವುಗಳ ಮೇಲೆ ಆಧುನಿಕತೆ ಹೇಗೆ ಪ್ರಭಾವ ಬೀರಿದೆ. ಇದರಿಂದ ಎಷ್ಟು ಪ್ರಯೋಜನ ಹಾಗೂ ಎಷ್ಟು ಅಪ್ರಯೋಜನವಾಗುತ್ತಿದೆ ಎಂಬುದರ ಬಗ್ಗೆ ತಿಳಿಸಿಕೊಡಲಾಗಿದೆ. ನಂತರ ಈ ಕಲೆ, ಪ್ರದರ್ಶನಗಳನ್ನು ಉಳಿಸಿ-ಬೆಳೆಸಿಕೊಳ್ಳಲು ನಾವು ಯಾವ ಮಾನದಂಡಗಳನ್ನು ಅನುಸರಿಸಬೇಕು ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಅಧ್ಯಯನದ ಕೊನೆಯ ಭಾಗ ಸಮಾರೋಪದಲ್ಲಿ ಪ್ರಸ್ತುತ ಅಧ್ಯಯನವು ಕೈಗೊಂಡಿರುವ ಹಿನ್ನೆಲೆ ಮತ್ತು ಅಧ್ಯಯನದ ಸ್ವರೂಪವನ್ನು ಕುರಿತು ಸಂಕ್ಷಿಪ್ತವಾಗಿ ಹೇಳಲಾಗಿದೆ. ಅಲ್ಲದೆ ಮುಖ್ಯವಾಗಿ ಈ ಅಧ್ಯಾಯದಲ್ಲಿ ಒಟ್ಟು ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಹಾಗೂ ಕೆಲವು ಸಲಹೆಗಳನ್ನು ತಿಳಿಸಲಾಗಿದೆ.

**ಫಲಿತಗಳು**

- ಇಂದಿನ ಆಧುನಿಕ ವೈಜ್ಞಾನಿಕ, ತಾಂತ್ರಿಕತೆ ತಂದ ಸಮಾಜದಲ್ಲಿ ಜಾನಪದ ಹುಟ್ಟುವ ಮೂಲ ಹಿಂದಿನಷ್ಟು ಸಮೃದ್ಧ ಅಲ್ಲದೆ ಹೋಗಬಹುದು. ಆದರೆ ಬದಲಾದ ಸಂದರ್ಭದಲ್ಲಿ ಜಾನಪದ ಇದ್ದೇ ಇರುತ್ತದೆ.
- ಜಾನಪದ ನಮ್ಮ ಜನಪದರಿಂದ ಬಳುವಳಿಯಾಗಿ ಬಂದ ಒಂದು ಅತ್ಯಮೂಲ್ಯ ಆಸ್ತಿ. ಅದನ್ನು ಪೋಷಿಸಿ ಸಂರಕ್ಷಣೆ ಮಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆ.

- ಅಳಿದು ಹೋಗುತ್ತಿರುವ ಪರಂಪರಾಗತ ವಸ್ತು ವಿಶೇಷಗಳನ್ನು ಮುಂದಿನ ತಲೆಮಾರುಗಳ ಅರಿವಿಗಾಗಿ ಕಾಯ್ದಿಡಬೇಕು.
- ಜಾನಪದ ಲೋಕವು ಜಾನಪದ ಸಂರಕ್ಷಣೆ, ಸಂವರ್ಧನೆ, ಪ್ರಚಾರ ಮತ್ತು ಪ್ರಸಾರಗಳನ್ನು ಪ್ರಧಾನ ಆಶಯಗಳನ್ನಾಗಿಸಿಕೊಂಡಿದೆ.
- ಜನಪದರ ಬಾಳು-ಬದುಕು, ಕಲೆ-ಆಚರಣೆ, ಹಬ್ಬ-ಹರಿದಿನ, ಕುಣಿತ-ಮರೆತ, ಹಾಡು-ಪಾಡುಗಳ ಸಂಗ್ರಹ, ಸಂಶೋಧನೆ ಪ್ರಸಾರ ಇದರ ಮುಖ್ಯ ಧ್ಯೇಯವಾಗಿದೆ.
- ಪ್ರಾಚೀನ ಕಾಲದ ಜನರ ಆಚಾರ-ವಿಚಾರ, ರೂಢಿ-ಸಂಪ್ರದಾಯಗಳನ್ನು ಅನುಸರಿಸಬೇಕು.
- ಜಾನಪದವು ಸಾಯಲು ಇಷ್ಟಪಡದ ಜೀವಂತ ಪಳೆಯುಳಿಕೆಯಾಗಿದೆ.
- ಎಂತಹ ನಾಗರೀಕ ಸಮಾಜದಲ್ಲೂ ಜಾನಪದ ಉಸಿರಾಡುವುದನ್ನು ನೋಡಬಹುದು.
- ಜಾನಪದ ಪರಂಪರೆಗಳು ತಲೆಮಾರಿನಿಂದ ತಲೆಮಾರಿಗೆ ಹರಿದು ಬರುವಂತಹುಗಳಾಗಿವೆ.
- ಜನಪದ ಸಂಪ್ರದಾಯ, ಆಚರಣೆ, ಕುಣಿತ, ಆಟ-ಪಾಠ, ನಂಬಿಕೆ, ಪೂಜೆ, ಪುರಸ್ಕಾರ - ಹೀಗೆ ವಿವಿಧ ಬಗೆಯ ಜಾನಪದ ಸಂಸ್ಕೃತಿಯನ್ನು ಜನರು ಇಂದಿಗೂ ಆಚರಿಸಿಕೊಂಡು ಬರುತ್ತಿದ್ದಾರೆ.
- ಜಾನಪದ ಪರಂಪರೆ ಎನ್ನುವುದು ಭೂತಕಾಲದ ಪ್ರತಿಧ್ವನಿಯಾಗಿರುವಂತೆ ವರ್ತಮಾನ ಕಾಲದ ಪ್ರತಿಧ್ವನಿಯೂ ಆಗಿದೆ.
- ಮೌಖಿಕ ಪರಂಪರೆಗಳು ಸಾಮಾನ್ಯವಾಗಿ ರೈತರಲ್ಲಿ, ಹಳ್ಳಿಗರಲ್ಲಿ, ಅನಕ್ಷರಸ್ಥರಲ್ಲಿ, ನಾಗರೀಕತೆ ಯಿಂದ ಹೊರಗಿರುವವರಲ್ಲಿ ಕಂಡು ಬರುತ್ತಿವೆ.
- ಜಾನಪದೀಯ ವಿಚಾರಗಳು ಜಡವಾಗಿರುವುದಿಲ್ಲ. ಅವು ಸಕ್ರಿಯವಾಗಿರುತ್ತವೆ.
- ಒಂದು ನಿರ್ದಿಷ್ಟ ಪ್ರದೇಶದ ಜನವರ್ಗಗಳ ಸಂಸ್ಕೃತಿಯನ್ನು ತಿಳಿಯಲು ಜಾನಪದ ಪರಂಪರೆಗಳು ಸಹಾಯಕವಾಗುತ್ತಿವೆ.
- ಹಿಂದಿನ ದಿನಗಳಲ್ಲಿ ಜನಪದ ಕಲೆಗಳು ಎಂದರೆ ಎಲ್ಲೆಲ್ಲೂ ಸಂಭ್ರಮ ಸಡಗರ, ಒಂದು ರೀತಿಯ ಹಬ್ಬದ ವಾತಾವರಣವೇ ಏರ್ಪಡುತ್ತಿತ್ತು.
- ಪ್ರಸ್ತುತ ದಿನಗಳಲ್ಲಿ ಜನಪದ ಕಲೆಗಳ ಮೇಲೆ ತೀವ್ರ ಪೆಟ್ಟು ಬಿದ್ದು ಕಲೆಗಳು ಕ್ಷೀಣಿಸುತ್ತಿವೆ.
- ಇಂದು ಜನಪದ ಕಲೆಗಳನ್ನು ಪ್ರದರ್ಶಿಸುವವರು ವಿರಳವಾಗಿದ್ದು ಇದನ್ನು ನೋಡಿ ಆಸ್ವಾಧಿಸುವವರೂ ಕೂಡ ಬೆರಳೆಣಿಕೆಯಷ್ಟಾಗಿದ್ದಾರೆ.
- ಜನಪದ ಕಲಾವಿದರಿಗೆ ಇಂದು ಸರಿಯಾದ ಮನ್ನಣೆ, ಗೌರವಗಳು ಸಿಗುತ್ತಿಲ್ಲ. ಅಲ್ಲದೆ ಕಲೆಯಿಂದ ಬಂದ ಹಣದಲ್ಲಿ ಜೀವನ ಸಾಗಿಸುವುದು ಕಷ್ಟಕರವಾಗಿದ್ದು, ಆ ಕಾರಣ ಕಲಾವಿದರು ಕಲೆಯನ್ನು ಬಿಡುತ್ತಿದ್ದಾರೆ.

- ಈಗಿನ ಜನರು ಹೆಚ್ಚಾಗಿ ಪ್ರದರ್ಶಕ ಕಲೆಗಳನ್ನು ನಿರ್ಲಕ್ಷಿಸುತ್ತಿದ್ದಾರೆ. ಕಾರಣ ಹೊಸ ರೀತಿಯ ತಂತ್ರಜ್ಞಾನದಿಂದ ಕೂಡಿದ ಸಿನಿಮಾಗಳು, ದೂರದರ್ಶನ ಸಹ ಇದಕ್ಕೆ ಹೊರತಾಗಿಲ್ಲ.
- ಹಿಂದೆ ಹಳ್ಳಿಗಳಲ್ಲಿ ಹಬ್ಬ-ಆಚರಣೆಗಳ ಸಮಯದಲ್ಲಿ ಜನಪದ ಕಲೆಗಳಿಗೆ ಎಲ್ಲಿಲ್ಲದ ಸ್ಥಾನ. ಅವರು ಆ ಕಲೆಗಳನ್ನು ಗೌರವಿಸಿ ಪೂಜಿಸುತ್ತಿದ್ದರು. ದಿನಗಳು ಉರುಳಿದಂತೆಲ್ಲಾ ಎಲ್ಲವೂ ಕಾಲಕ್ಕೆ ಅನುಗುಣವಾಗಿ ಬದಲಾವಣೆಯನ್ನು ಹೊಂದುತ್ತಿವೆ.
- ಕರ್ನಾಟಕ ಜಾನಪದ ಪರಿಷತ್ತು ಹಾಗೂ ಜಾನಪದ ಲೋಕವು ಜಾನಪದ ಪರಂಪರೆಗಳನ್ನು ಉಳಿಸಿ-ಬೆಳೆಸಲು ನಾನಾ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.
- ಜಾನಪದ ಲೋಕವು ಇಂದು ಜನಪದ ಕಲಾವಿದರನ್ನು ಗುರುತಿಸಿ, ಅವರಿಗೆ ತರಬೇತಿಯನ್ನು ನೀಡುವ ಕೆಲಸದಲ್ಲಿ ಮುಂದಾಗಿದೆ.
- ತರಬೇತಿ ಪಡೆದ ಕಲಾವಿದರನ್ನು ರಾಜ್ಯದ ನಾನಾ ಭಾಗಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪ್ರದರ್ಶನ ನೀಡಲು ಕಳುಹಿಸಿಕೊಡಲಾಗುತ್ತಿದೆ.
- ಜಾನಪದ ಲೋಕವು ಪೂಜಾ ಕುಣಿತ, ಪಟ್ಟದ ಕುಣಿತ, ಡೊಳ್ಳುಕುಣಿತ ರಂಗದ ಕುಣಿತ, ತಮಟೆ ಬಾರಿಸುವುದು ಇನ್ನು ಮುಂತಾದ ಕಲೆಗಳಲ್ಲಿ ತರಬೇತಿ ನೀಡಿ ಕಲಾತಂಡಗಳನ್ನು ರಚಿಸಲಾಗುತ್ತಿದೆ.
- ಕಲಾವಿದರು ಹಾಗೂ ಕಲಾ ಪ್ರದರ್ಶನಕ್ಕೆ ತಕ್ಕ ವಾತಾವರಣವನ್ನು ನಿರ್ಮಿಸಲಾಗಿದೆ.
- ಸಮೂಹ ಮಾಧ್ಯಮಗಳಿಂದ ವೃತ್ತಪತ್ರಿಕೆ, ರೇಡಿಯೋ, ದೂರದರ್ಶನ, ಅಂತರ್ಜಾಲ ಮತ್ತು ಹೊಸ ತಂತ್ರಜ್ಞಾನಗಳಲ್ಲಿ ಆದ ಕ್ರಾಂತಿಕಾರಕ ಬದಲಾವಣೆಯು ಜಾನಪದ ಪರಂಪರೆಗಳು ನಶಿಸಲು ಕಾರಣವಾಗುತ್ತಿವೆ.
- ಜಾನಪದ ಲೋಕದಲ್ಲಿ ಪ್ರತಿ ತಿಂಗಳು ಜಾನಪದಕ್ಕೆ ಸಂಬಂಧಿಸಿದಂತೆ ಸಾಂಸ್ಕೃತಿಕ ಕಾರ್ಯಕ್ರಮ ಗಳನ್ನು ನಡೆಸಲಾಗುತ್ತಿದೆ.
- ಜನಪದ ಕಲೆ, ಜಾನಪದ ಗೀತೆ, ಜಾನಪದ ವಸ್ತುಗಳು, ಜಾನಪದ ಸಾಹಿತ್ಯ ಮೊದಲಾದವುಗಳಿಗೆ ಸಂಬಂಧಿಸಿದಂತೆ ಜಾನಪದ ಕಮ್ಮಟಗಳು, ವಿಚಾರ ಸಂಕಿರಣಗಳು ಹಾಗೂ ತರಬೇತಿ ಶಿಬಿರಗಳನ್ನು ನಡೆಸಲಾಗುತ್ತಿದೆ.
- ಪ್ರತಿ ವರ್ಷ ಅಕ್ಟೋಬರ್ ತಿಂಗಳಲ್ಲಿ ದಸರಾ ಉತ್ಸವ, ಜುಲೈ ತಿಂಗಳಿನಲ್ಲಿ ಗಾಳಿಪಟ ಉತ್ಸವ ಹಾಗೂ ಫೆಬ್ರವರಿ-ಮಾರ್ಚ್ ತಿಂಗಳಿನಲ್ಲಿ ಲೋಕೋತ್ಸವ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ.
- ಈ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ನಾಡಿನಾದ್ಯಂತ ಜನಪದ ಕಲಾವಿದರನ್ನು ಕರೆಯಿಸಿ, ಪ್ರದರ್ಶನ ನೀಡಲಾಗುವುದು.
- ಕಲಾವಿದರಿಗೆ ಭತ್ಯೆ, ಪ್ರಶಸ್ತಿ, ಪುರಸ್ಕಾರ ನೀಡಿ ಗೌರವಿಸಲಾಗುವುದು.
- ಪುರಾತನ ಕಾಲದಿಂದಲೂ ಮನುಷ್ಯನ ಅಗತ್ಯಕ್ಕೆ ಬೇಕಾದ ಜಾನಪದ ವಸ್ತುಗಳನ್ನು ಇಲ್ಲಿ ನೋಡಬಹುದು.

- ಇಲ್ಲಿ ಸಂಗ್ರಹಗೊಂಡಿರುವ ಅತ್ಯಂತ ಕನಿಷ್ಟ ವಸ್ತುವೂ ಕೂಡ ಸಾಂಸ್ಕೃತಿಕ ಇತಿಹಾಸದ ದೃಷ್ಟಿಯಿಂದ ಪ್ರಮುಖವಾದುದು.
- ವಸ್ತುಸಂಗ್ರಹಾಲಯವಾಗಿ ಜಾನಪದ ಲೋಕವು ಇಂದಿಗೂ ನಾಡಿನಾದ್ಯಂತ ಜಾನಪದ ವಸ್ತುಗಳನ್ನು ಸಂಗ್ರಹಿಸಿ, ಪ್ರದರ್ಶನ ನೀಡುವ ಕೆಲಸದಲ್ಲಿ ಮುಂದಾಗಿದೆ.
- ಜನಪದ ಹಾಡು-ಕಥೆಗಳ ಸಂಗ್ರಹ, ಧ್ವನಿಮುದ್ರಣ, ಜನಪದ ಕಲೆಗಳ ವೀಡಿಯೋ ಚಿತ್ರೀಕರಣ ಜೊತೆಗೆ ಕಲಾವಿದರ ಸಂದರ್ಶನ ಮಾಡಲಾಗುತ್ತಿದೆ.
- ವಸ್ತುಸಂಗ್ರಹಾಲಯದಲ್ಲಿ ವಸ್ತುಗಳನ್ನು ವಿವಿಧ ಬಗೆಗಳಾಗಿ ವರ್ಗೀಕರಿಸಿ ಪ್ರದರ್ಶಿಸಲಾಗಿದೆ.
- ಈ ವಸ್ತುಗಳ ಸಂಗ್ರಹಕ್ಕೆ ಉತ್ತಮ ಯೋಜನೆಗಳನ್ನು ರೂಪಿಸಲಾಗಿದೆ. ಇದರಿಂದ ನೋಡುಗರಿಗೆ ಕುತೂಹಲ ಮತ್ತು ಸಂತೋಷವಾಗುತ್ತಿವೆ.
- ಲೋಕಮಹಲ್ ವಸ್ತುಸಂಗ್ರಹಾಲಯದಲ್ಲಿ ಮಕ್ಕಳ ಆಟಿಕೆ ವಸ್ತುಗಳು, ಅಡುಗೆ ಮನೆ ಸಲಕರಣೆ ಗಳು, ವಾದ್ಯಗಳು, ವಿವಿಧ ಬಗೆಯ ಗೊಂಬೆಗಳು, ಮದುವೆ ಸಲಕರಣೆಗಳು, ನಾಣ್ಯಗಳು, ವಿಗ್ರಹಗಳು, ಒಡವೆಗಳು, ವರ್ಣಚಿತ್ರಗಳು - ಹೀಗೆ ವಿವಿಧ ವರ್ಗಗಳಾಗಿ ವಗೀರ್ಕರಿಸಿ ಪ್ರದರ್ಶಿಸ ಲಾಗಿದೆ.
- ಲೋಕಮಾತಾ ಮಂದಿರದಲ್ಲಿ ಅಡುಗೆ ಮನೆ ಮತ್ತು ಉಗ್ರಾಣ ವಸ್ತುಗಳು, ಗೃಹಬಳಕೆಯ ವಸ್ತುಗಳು, ಪಶುಸಂಗೋಪನೆ ಸಲಕರಣೆಗಳು, ಕೃಷಿ ಸಲಕರಣೆಗಳು - ಹೀಗೆ ದುಡಿಮೆಯೇ ಉಸಿರಾಗಿರುವ ಹಳ್ಳಿಗರ ಬದುಕಿನಲ್ಲಿ ಸೊಗಸು, ಸೊಬಗನ್ನು ನೀಡಿರುವ ಎಲ್ಲಾ ವಸ್ತುಗಳು ಇಲ್ಲಿವೆ.
- ಚಿತ್ರಕುಟೀರದಲ್ಲಿ ನಾಗೇಗೌಡರು ತಪಸ್ಸಿನೋಪಾದಿಯಲ್ಲಿ ಕೈಗೊಂಡ ಧ್ವನಿಮುದ್ರಣ, ಚಿತ್ರೀಕರಣ ದೃಶ್ಯ ಮಾಧ್ಯಮಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ ಹಾಗೂ ಗೌಡರು ವಿವಿಧ ಸ್ಥಳಗಳಿಗೆ ಹೋದಾಗ ಅಲ್ಲಿ ದೊರೆತ ಜಾನಪದ ವಸ್ತುಗಳ ಸಂಗ್ರಹ ಕಾರ್ಯ ಮೊದಲಾದ ಕಾರ್ಯಗಳ ಸಂದರ್ಭದ ಛಾಯಾಚಿತ್ರಗಳನ್ನು ಇಲ್ಲಿ ನೋಡಬಹುದು.
- ಶಿಲ್ಪಮಾಳದಲ್ಲಿ ಒಂದು ಸಾವಿರದ ಎರಡು ನೂರು ವರ್ಷಗಳಿಗೂ ಹಿಂದಿನ ವೀರಗಲ್ಲು, ಸತೀಕಲ್ಲುಗಳು, ಶಾಸನ ಕಲ್ಲುಗಳು, ರಥ, ಫಿರಂಗಿ ಮೊದಲಾದವುಗಳನ್ನು ಕಾಣಬಹುದು.
- ಆಯಗಾರರ ಮಾಳದಲ್ಲಿ ಕಣ್ಮರೆಯಾಗುತ್ತಿರುವ ಹಳ್ಳಿಯ ಕಸುಬುಗಳಾದ ಕುಂಬಾರಿಕೆ, ಕಮ್ಮಾರಿಕೆಯ ಕೆಲಸ ಕಾರ್ಯಗಳನ್ನು ನೋಡಬಹುದು. ಜೊತೆಗೆ ಇಲ್ಲಿ ಕರಕುಶಲ ವಸ್ತುಗಳನ್ನು ತಯಾರಿಸಿ ಮಾರಾಟ ಮಾಡಲಾಗುತ್ತಿದೆ.
- ಜಾನಪದ ವಸ್ತುಗಳನ್ನು ಮಾಲಿನ್ಯತೆ, ಕ್ರಿಮಿಕೀಟಗಳಿಂದಾಗುವ ಅಪಾಯ ತಪ್ಪಿಸಲು ಸೂಕ್ತ ಕ್ರಮ ಕೈಗೊಳ್ಳಲಾಗಿದೆ.

- ಹಿಂದೆ ಜಾನಪದ ವಸ್ತುಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಿದ್ದರು. ಆದರೆ ಇಂದು ಆ ವಸ್ತುಗಳು ಆಧುನಿಕತೆಯ ಪ್ರಭಾವದಿಂದ ಅಷ್ಟಾಗಿ ಬಳಕೆಯಾಗುತ್ತಿಲ್ಲ. ಅವುಗಳನ್ನು ಬಳಸುವುದು ಕೀಳೆಂಬ ಭಾವನೆ ಉಂಟಾಗಿದೆ.
- ಶೈಕ್ಷಣಿಕ ಕೇಂದ್ರವಾಗಿ ಜಾನಪದ ಮಹಾವಿದ್ಯಾಲಯವು ನೂರಾರು ವಿದ್ಯಾರ್ಥಿಗಳಿಗೆ ಜಾನಪದ ಶಿಕ್ಷಣವನ್ನು ಬೋಧಿಸಲಾಗುತ್ತಿದೆ.
- ವಿದ್ಯಾರ್ಥಿಗಳಿಗೆ ಇಲ್ಲಿ ಜಾನಪದ ಶಿಕ್ಷಣದ ಜೊತೆಗೆ ವಿವಿಧ ಜನಪದ ಕಲೆಗಳಲ್ಲಿ ತರಬೇತಿ ನೀಡಲಾಗುವುದು. ಉದಾ:- ಪಟದ ಕುಣಿತ, ಪೂಜಾ ಕುಣಿತ, ಸುಗ್ಗಿ ಕುಣಿತ, ತಮಟೆ ಬಾರಿಸುವುದು ಮುಂತಾದವುಗಳು.
- ಈ ಮಹಾವಿದ್ಯಾಲಯದಲ್ಲಿ ಎಸ್.ಎಸ್.ಎಲ್.ಸಿ. ಪಾಸಾದ ವಿದ್ಯಾರ್ಥಿಗಳು ಜಾನಪದ ಸರ್ಟಿಫಿಕೇಟ್ ತರಗತಿಗಳಿಗೆ ಮತ್ತು ಪಿ.ಯು.ಸಿ. ಪಾಸಾದ ವಿದ್ಯಾರ್ಥಿಗಳು ಜಾನಪದ ಡಿಪ್ಲೊಮಾ ತರಗತಿಗಳಿಗೆ ಸೇರಲು ಮುಕ್ತ ಅವಕಾಶವಿದೆ.
- ಸಂಶೋಧನಾ ಕೇಂದ್ರವಾಗಿ ಜಾನಪದ ಲೋಕವು ಸಂಶೋಧಕರಿಗೆ ತಕ್ಕ ಸ್ಥಳವಾಗಿದೆ. ಸಂಶೋಧನೆ ಮಾಡಲು ಬರುವವರಿಗೆ ಅಗಾದ ಮಾಹಿತಿ ನೀಡುತ್ತಿದೆ.
- ಸಮಕಾಲೀನ ಸಂದರ್ಭದಲ್ಲಿ ಜಾನಪದ ಪರಂಪರೆಗಳ ಮೇಲೆ ಆಧುನಿಕತೆಯ ಪ್ರಭಾವ ಹೆಚ್ಚಾಗಿದೆ.
- ಇವತ್ತಿನ ವೈಜ್ಞಾನಿಕ ಮತ್ತು ತಾಂತ್ರಿಕ ಬದಲಾವಣೆಗಳಿಂದ ಜನರು ಜಾನಪದ ಕಾರ್ಯಕ್ರಮಗಳಲ್ಲಿ ತೊಡಗುತ್ತಿಲ್ಲ.
- ದೂರದರ್ಶನ, ಸಿನಿಮಾ, ಪತ್ರಿಕೆಗಳ ಪ್ರಭಾವವು ಹೆಚ್ಚಾಗಿ ಜನರು ಇವುಗಳಿಗೆ ಮಣಿದು ಜಾನಪದ ವಸ್ತುಗಳು, ಕಲೆ, ಹಾಡು, ಕುಣಿತ-ಮೆರೆತಗಳನ್ನು ಮರೆಯುತ್ತಿದ್ದಾರೆ.
- ಹಬ್ಬ, ಜಾತ್ರೆ, ಉತ್ಸವಗಳು ಕ್ರಮೇಣ ನಶಿಸುತ್ತಿವೆ.
- ಆಧುನಿಕತೆಯಿಂದ ಜನರ ಅಭಿವ್ಯಕ್ತಿ ಮತ್ತು ಅಭಿರುಚಿಗಳಲ್ಲಿ ಬದಲಾವಣೆಗಳಾಗುತ್ತಿವೆ.
- ಆಧುನಿಕ ಯಂತ್ರೋಪಕರಣಗಳ ಬಳಕೆಯಿಂದಾಗಿ ಹಳ್ಳಿಗರ ಪಾರಂಪರಿಕ ವೃತ್ತಿಗಳಾದ ಬಡಿಗ, ಕಮ್ಮಾರ, ಕುಂಬಾರ, ಕರಕುಶಲಗಾರ ಮುಂತಾದ ವೃತ್ತಿಗಳು ಮೂಲೆಗುಂಪಾಗುತ್ತಿವೆ.
- ಜನರು ಇಂದು ಗ್ರಾಮೀಣ ಕ್ರೀಡೆಗಳಲ್ಲಿ ಹೆಚ್ಚಿನ ಆಸಕ್ತಿವಹಿಸುತ್ತಿಲ್ಲ.
- ಗ್ರಾಮೀಣ ಜನರ ಜಾನಪದ ಗೀತೆ, ಸೋಬಾನೆ ಪದಗಳು, ನೃತ್ಯ, ಸಂಗೀತ ಇವು ಕಾಲಕ್ಕೆ ಅನುಗುಣವಾಗಿ ಬದಲಾವಣೆಗಳಾಗುತ್ತಿವೆ.

**ಸಲಹೆಗಳು**

- ಪ್ರಾಚೀನ ಕಾಲದ ಜಾನಪದ ಸಂಸ್ಕೃತಿಯನ್ನು ನಶಿಸದಂತೆ ಶೇಖರಿಸಿ, ಸಂರಕ್ಷಿಸಿ ಆಚರಿಸುವುದು.
- ಜಾನಪದ ಕಲೆಗಳನ್ನು ಬೆಳೆಸಬೇಕು.

- ಜಾನಪದ ಶಿಕ್ಷಣಕ್ಕೆ ಸರ್ಕಾರ ಹೆಚ್ಚಿನ ಗಮನಹರಿಸಬೇಕು.
- ಜಾನಪದ ಕಲೆಗಳನ್ನು ಸ್ಥಳೀಯ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಬೆಳೆಸಲು ಸರ್ಕಾರ ಕ್ರಮ ಕೈಗೊಳ್ಳಬೇಕು.
- ಪ್ರಾಚೀನ ಕಾಲದ ಜನರ ಆಚಾರ-ವಿಚಾರಗಳನ್ನು ಗೌರವಿಸಬೇಕು.
- ಜಾನಪದ ಸಾಹಿತ್ಯಕ್ಕೆ ಉತ್ತೇಜನ ನೀಡಬೇಕು.
- ಜನಪದ ಸಂಪ್ರದಾಯಗಳಾದ ಆಚರಣೆ, ಕುಣಿತ, ಆಟಪಾಠ, ನಂಬಿಕೆ, ಪೂಜೆ, ಪುರಸ್ಕಾರಕ್ಕೆ ಉತ್ತೇಜನ ನೀಡುವುದು.
- ಹೆಚ್ಚು ಹೆಚ್ಚು ಜಾನಪದ ವಸ್ತುಸಂಗ್ರಹಾಲಯಗಳ ನಿರ್ಮಾಣಕ್ಕೆ ಸರ್ಕಾರ ಪ್ರೋತ್ಸಾಹ ನೀಡಬೇಕು.
- ಅಳಿದು ಹೋಗುತ್ತಿರುವ ಪರಂಪರಾಗತ ವಸ್ತು-ವಿಶೇಷಗಳನ್ನು ಮುಂದಿನ ತಲೆಮಾರುಗಳ ಅರಿವಿಗಾಗಿ ಶೇಖರಿಸಿ ಸಂರಕ್ಷಿಸಬೇಕು.
- ಜಾನಪದ ಶಿಕ್ಷಣ, ಜನಪದ ಕಲೆ, ವಸ್ತುಪ್ರದರ್ಶನ ಮುಂತಾದ ಜಾನಪದ ಕಾರ್ಯಚಟುವಟಿಕೆಗಳ ಬೆಳವಣಿಗೆಗೆ ಸರ್ಕಾರ ಹೆಚ್ಚಿನ ಗಮನಹರಿಸಬೇಕು.
- ಜಾನಪದ ವಸ್ತುಸಂಗ್ರಹಾಲಯಗಳಲ್ಲಿ ಶೇಖರಿಸಿಲ್ಲದ ಎಷ್ಟೋ ಪುರಾತನ ಕಾಲದ ವಸ್ತುಗಳ ಇವೆ. ಅಂತಹ ವಸ್ತುಗಳನ್ನು ಶೇಖರಿಸಲು ಜನರು ಸಹಕರಿಸಬೇಕು.
- ಜಾನಪದ ಶೈಕ್ಷಣಿಕ ಕಾರ್ಯಕ್ರಮಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಬೇಕು.
- ಆಧುನಿಕ ಸಂದರ್ಭದಲ್ಲಿ ಜಾನಪದ ವಸ್ತು-ವಿಶೇಷಗಳು ಸಾಯದಂತೆ ನೋಡಿಕೊಳ್ಳಬೇಕು.
- ಜಾನಪದ ಲೋಕದಲ್ಲಿ ನಡೆಯುವ ತರಬೇತಿ ಶಿಬಿರಗಳು, ಜಾನಪದ ಕಮ್ಮಟಗಳು, ವಿಚಾರಸಂಕಿರಣಗಳು, ಕಲೆ ಪ್ರದರ್ಶನಗಳು ಹೆಚ್ಚು ಹೆಚ್ಚು ನಡೆಯುವಂತೆ ಸರ್ಕಾರ ಕ್ರಮ ಕೈಗೊಳ್ಳಬೇಕು.
- ಸ್ಥಳೀಯ, ರಾಜ್ಯ, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಜಾನಪದ ಶಿಕ್ಷಣವನ್ನು ವಿಶ್ವವಿದ್ಯಾಲಯ ಮಟ್ಟದಲ್ಲಿ ಬೆಳೆಸಬೇಕು.
- ಜಾನಪದ ಪರಂಪರೆ ಎನ್ನುವುದು ಭೂತಕಾಲದ ಪ್ರತಿಧ್ವನಿಯಾಗಿರುವಂತೆ ವರ್ತಮಾನ ಕಾಲದ ಪ್ರತಿಧ್ವನಿಯೂ ಆಗಿದೆ ಎಂಬುದನ್ನು ಜನತೆಗೆ ತಿಳಿಸಿಕೊಡುವುದು.
- ಜನಪದರ ಬಾಳು-ಬದುಕು, ಹಬ್ಬ-ಹರಿದಿನಗಳು, ಮದುವೆ-ಮುಂಜಿಗಳು, ಕೆಲಸ-ಕಸುಬುಗಳು, ಉಡುಗೆ-ತೊಡುಗೆಗಳು ಇತ್ಯಾದಿಗಳಿಗೆ ಸಂಬಂಧಪಟ್ಟ ಒಳ ಹಾಗೂ ಹೊರಾಂಗಣ ಮ್ಯೂಸಿಯಂಗಳ ಸ್ಥಾಪನೆ ಮಾಡುವುದು.
- ಗ್ರಾಮೀಣರ ಧೀಮಂತ ಬದುಕಿಗೆ ಸಾಕ್ಷಿಯಾದ ವೀರಗಲ್ಲು, ಮಾಸ್ತಿಕಲ್ಲು, ಶಿಲಾಶಾಸನಗಳು ಇತ್ಯಾದಿಗಳನ್ನು ಸಂಗ್ರಹ ಮಾಡುವುದು.

- ಗ್ರಾಮೀಣ ಕಲಾವಿದರು ತಮ್ಮ ಕಲೆಗಳನ್ನು ಇಂದಿನ ಬದಲಾದ ಪರಿಸ್ಥಿತಿಗೆ ತಕ್ಕಂತೆ ಮಾರ್ಪಡಿಸಿ ಕೊಂಡು ಅದರ ಮೂಲ ಸತ್ವಕ್ಕೆ ಭಂಗ ಬರದಂತೆ ಪ್ರದರ್ಶನ ಮಾಡುವ ವ್ಯವಸ್ಥೆ. ಇದಕ್ಕಾಗಿ ತಕ್ಕ ತರಬೇತಿ, ವೇಷ-ಭೂಷಣಗಳ ವ್ಯವಸ್ಥೆ ಇತ್ಯಾದಿಗಳ ಏರ್ಪಾಡು ಮಾಡುವುದು.
- ಇಂದಿನ ಯುವ ಪೀಳಿಗೆಗೆ ಜನಪದ ಕಲೆಗಳಲ್ಲಿ ತರಬೇತಿ ಹಾಗೂ ಜಾನಪದ ಶಿಕ್ಷಣ ನೀಡುವುದು.
- ಜನಪದ ಗೀತೆ, ನೃತ್ಯ, ಯಕ್ಷಗಾನ-ಬಯಲಾಟಗಳನ್ನು ರೇಡಿಯೋ ಮತ್ತು ದೂರದರ್ಶನಗಳಲ್ಲಿ ಪ್ರಸಾರ ಮಾಡಲು ಅನುಕೂಲವಾಗುವಂತೆ ಕಲಾವಿದರನ್ನು ತರಬೇತಿಗೊಳಿಸಿ ಅವರಿಗೆ ಆ ಪ್ರಸಾರ ಮಾಧ್ಯಮಗಳಲ್ಲಿ ಅವಕಾಶಗಳನ್ನು ಒದಗಿಸುವುದು.
- ಗ್ರಾಮೀಣರ ಬಾಯಲ್ಲಿ ಇನ್ನೂ ವಿಪುಲವಾಗಿರುವ ಹಾಡು, ಕಥೆ, ಗಾದೆ, ಒಗಟು, ಒಡಪು ಇತ್ಯಾದಿಗಳ ಧ್ವನಿಮುದ್ರಣ ಕಾರ್ಯವನ್ನು ಮಾಡುವುದು.
- ಜನಪದರ ಜೀವನದ ಸರ್ವ ಪ್ರಕಾರಗಳ ವೀಡಿಯೋ ಚಿತ್ರೀಕರಣ, ಸಾಕ್ಷ್ಯಚಿತ್ರ ತಯಾರಿಕೆ, ಸ್ಲೈಡ್‌ಗಳ ತಯಾರಿಕೆ ಮತ್ತು ಅವುಗಳ ಪ್ರದರ್ಶನ ಮಾಡುವುದು.
- ಜಾನಪದದ ಸಮಗ್ರ ಸಂಗ್ರಹ, ಅಧ್ಯಯನ, ಸಂಶೋಧನೆ ಈ ಕೆಲಸಗಳಿಗೆ ಪೂರಕವಾದಂತಹ ಭಾರತ ಹಾಗೂ ದೇಶ-ವಿದೇಶಗಳಲ್ಲಿ ಪ್ರಕಟವಾದ ಎಲ್ಲಾ ಜಾನಪದ ಗ್ರಂಥಗಳ ಸ್ಲೈಡ್‌ಗಳ, ಸಾಕ್ಷ್ಯಚಿತ್ರಗಳ ಮತ್ತು ಪತ್ರಿಕೆಗಳ ಬೃಹತ್ ಭಂಡಾರದ ಸ್ಥಾಪನೆ ಮಾಡುವುದು.
- ದೇಶ-ವಿದೇಶಿ ವಿದ್ವಾಂಸರು ಜಾನಪದದ ಅಧ್ಯಯನ ಮಾಡಲು ವ್ಯವಸ್ಥೆ ಮಾಡುವುದು.
- ಗ್ರಾಮೀಣ ಕರಕುಶಲ ವಸ್ತುಗಳ ತಯಾರಿಕೆ ಮತ್ತು ಮಾರಾಟ ಮಾಡುವುದು.
- ಕಣ್ಮರೆಯಾಗುತ್ತಿರುವ ಕತ್ತಿವರಸೆ, ಕುಸ್ತಿವರಸೆ, ದೊಣ್ಣೆವರಸೆ, ಬಿಜಲಿವರಸೆ ಇತ್ಯಾದಿ ಗಂಡು ಕಲೆಗಳಲ್ಲಿ ತರಬೇತಿ ನೀಡುವುದು.
- ಗ್ರಾಮೀಣ ಕ್ರೀಡೆಗಳಲ್ಲಿ ಹೆಚ್ಚಾಗಿ ಯುವಕ-ಯುವತಿಯರು ಪಾಲ್ಗೊಳ್ಳುವಂತೆ ಮಾಡಬೇಕು.

• • •

## ೧. ಪರಾಮರ್ಶನ ಗ್ರಂಥಗಳು

೧. ಪ್ರೊ. ಡಿ. ಲಿಂಗಯ್ಯ, ಡಾ. ಕೆ. ಸಂಧಾರೆಡ್ಡಿ, ೨೦೦೬, ಜಾನಪದ ಸ್ವರೂಪ ಮತ್ತು ಸಾಹಿತ್ಯ, ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್ ಪ್ರಿಂಟರ್ಸ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨. ಯು.ಎಸ್. ರಾಮಣ್ಣ, ೨೦೦೪, ಜಾನಪದ ವಸ್ತು ಸಂಗ್ರಹಾಲಯ, ಕನ್ನಡ ಭಾರತಿ ಪ್ರಕಾಶನ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೩. ಡಾ. ಚಕ್ಕರೆ ಶಿವಶಂಕರ್, ೨೦೦೧, ನಾಗಸಂಪದ, ಚಂದನ ಪ್ರಕಾಶನ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೪. ಪ್ರೊ. ಹಿ.ಶಿ. ರಾಮಚಂದ್ರೇಗೌಡ, ೨೦೦೪, ಜಾನಪದ ಗ್ರಹಿಕೆ; ಪರಿಕಲ್ಪನೆ, ಎಂ. ಮುನಿರಾಜು, ಇಳಾ ಮುದ್ರಣ ಪ್ರಕಾಶನ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಬೆಂಗಳೂರು.

೫. ಡಾ. ಡಿ.ಬಿ. ನಾಯಕ, ೨೦೦೫, ಜಾನಪದ ಲೇಖನಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೬. ಡಾ. ಜಿ.ಆರ್. ತಿಪ್ಪೇಸ್ವಾಮಿ, ಡಾ. ರಂಗಾರೆಡ್ಡಿ ಕೋಡಿರಾಂಪುರ, ೨೦೦೩, ಜಾನಪದ ಅನ್ವಯಿಕತೆ, ಎಂ. ಮುನಿರಾಜು, ಜಾಣಗೆರೆ ಮುದ್ರಣ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಬೆಂಗಳೂರು.

೭. ಡಾ. ಅಂಬಳಿಕೆ ಹಿರಿಯಣ್ಣ, ೨೦೦೦, ಜಾನಪದ ಪ್ರಕ್ರಿಯೆ : ಹಾಂಕೋದೃಷ್ಟಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೮. ಎಚ್.ಎಲ್. ನಾಗೇಗೌಡ, ೨೦೦೦, ಜಾನಪದ ಲೋಕ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೯. ಡಾ. ಮೊಗಳ್ಳಿ ಗಣೇಶ್, ೨೦೦೦, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೦. ಡಾ. ಚಕ್ಕರೆ ಶಿವಶಂಕರ್, ೨೦೦೮, ನಾಡೋಜ ಎಚ್.ಎಲ್. ನಾಗೇಗೌಡ, ಕೃತಿಕ ಪ್ರಿಂಟ್ ಆ್ಯಡ್ ಪ್ರಕಾಶನ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೧. ಪಿ.ಜೆ. ಗೋವಿಂದರಾಜು, ೨೦೦೭, ಮಿಂಚು(ದಲಿತ ಕಲೆಯ ಸಂಸ್ಕೃತಿಯ ಒಂದು ಅವಲೋಕನ), ಸ್ಮರಣ ಸಂಚಿಕೆ, ಜನಜಾಗೃತಿ ಪ್ರಕಾಶನ, ಬೆಂಗಳೂರು.

೧೨. ಪ್ರೊ. ವಿರೇಂದ್ರ ಸಿಂಪಿ, ೨೦೦೭, ಸಮಗ್ರ ಜನಪದ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೩. ಜೀನಹಳ್ಳಿ ಸಿದ್ಧಲಿಂಗಪ್ಪ, ೨೦೦೮, ಜನಪದ ಜಾಣಗಣಿತ, ಕೃತಿಕ ಪ್ರಿಂಟ್ ಆ್ಯಡ್ ಪ್ರಕಾಶನ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೪. ಡಾ. ಎಚ್.ಜೆ. ಲಕ್ಕಪ್ಪಗೌಡ, ೨೦೦೦, ಜಾನಪದ ಕೈಪಿಡಿ, ಲಕ್ಷ್ಮೀ ಮುದ್ರಣಾಲಯ, ಕನ್ನಡ ಪುಸ್ತಕ ಪ್ರಾಧಿಕಾರ, ಪಂಪ ಮಹಾಕವಿರಸ್ತೆ, ಚಾಮರಾಜಪೇಟೆ, ಬೆಂಗಳೂರು.

೧೫. ಪ್ರೊ. ಹಿ.ಚಿ. ಬೋರಲಿಂಗಯ್ಯ, ೨೦೦೨, ಕರ್ನಾಟಕ ಜನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೬. ಡಾ. ಹೆಬ್ಬಾಲೆ ಕೆ. ನಾಗೇಶ್, ೨೦೦೬, ಜಾನಪದ ಕರ್ನಾಟಕ, ಸಂಪುಟ-೫, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೭. ಬಸವರಾಜ ನೆಲ್ಲಿಸರ, ೧೯೯೧, ಜಾನಪದ ಮತ್ತು ಪೂರಕ ಕ್ಷೇತ್ರಗಳು, ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂ ಪೇಟೆ, ಕನ್ನಡ ಅಧ್ಯಯನ ವಿಭಾಗ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೧೮. ಡಾ. ಸ.ಚಿ. ರಮೇಶ್, ೨೦೦೫, ಜಾನಪದ ಕರ್ನಾಟಕ, ಸಂಪುಟ-೪, ಸಂಚಿಕೆ-೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೧೯. ಡಾ. ವೀರಣ್ಣ ದಂಡೆ, ೧೯೯೯, ಜಾನಪದ ಶಾಸ್ತ್ರ ಸಿದ್ಧಾಂತಗಳು, ನೆಲೆಮನೆ ಪ್ರಕಾಶನ, ರಂಗನಾಥ ನಗರ, ಶ್ರೀರಂಗಪಟ್ಟಣ, ಮಂಡ್ಯ.

೨೦. ಮುದೇನೂರು ಸಂಗಣ್ಣ, ಗೊಂದಲಿಗರ ದೇವೇಂದ್ರಪ್ಪನ ಆಟಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೨೧. ಗೊ.ರು. ಚನ್ನಬಸಪ್ಪ, ಕರ್ನಾಟಕ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

೨೨. ನಾಗವರ್ಮ, ೨೦೦೨, ಬಳ್ಳಾರಿ ಜಿಲ್ಲೆಯ ತೊಗಲುಗೊಂಬೆ ಆಟ, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೨೩. ಡಾ. ಬಸವರಾಜ ಮಲ್ಲಶೆಟ್ಟಿ, ಉತ್ತರ ಕರ್ನಾಟಕದ ಬಯಲಾಟಗಳು, ಸಂಶೋಧನಾ ಗ್ರಂಥಮಾಲೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೪. ಮೋಹನ್ ಎಸ್., ೨೦೦೨, ತುಳುನಾಡಿನ ಗೊಂದೋಳು ಪೂಜೆ, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

೨೫. ಚೆನ್ನಣ್ಣ ವಾಲೀಕರ, ಜಾನಪದ ಲೋಕ, ದಲಿತ ಬಂಡಾಯ ವಿಚಾರ ಪ್ರಚಾರ ಸಮಿತಿ, ಗುಲಬರ್ಗಾ.

೨೬. ಸುಮಂಗಲಾ ಅತ್ತಿಗೇರಿ, ೨೦೦೬, ಕೃಷಿ ಜಾನಪದ ಮತ್ತು ಮಹಿಳೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬.

## ಮಾಸಿಕ ಪತ್ರಿಕೆಗಳು

೧. ವಿ.ಎನ್. ಶಿವರಾಮು, ೧೯೮೭, ಜಾನಪದ ಜಗತ್ತು, ಜಾನಪದ ಲೋಕ ವಿಶೇಷ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೨. ಪ್ರೊ. ಡಿ. ಲಿಂಗಯ್ಯ, ೧೯೯೭, ಜುಲೈ-ಡಿಸೆಂಬರ್, ಜಾನಪದ ಜಗತ್ತು, ಸಂಪುಟ-೧೮, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೩. ಡಾ. ಚಕ್ಕರೆ ಶಿವಶಂಕರ್, ೨೦೦೬, ಜನವರಿ-ಡಿಸೆಂಬರ್, ಜಾನಪದ ಜಗತ್ತು, ಸಂಪುಟ-೨೭, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೪. ಪ್ರೊ. ಡಿ. ಲಿಂಗಯ್ಯ, ೨೦೦೭, ಜನವರಿ-ಜೂನ್, ಜಾನಪದ ಜಗತ್ತು, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೫. ಎಚ್.ಎಲ್. ನಾಗೇಗೌಡ, ೧೯೮೮, ಮೇ-ಜೂನ್, ಜಾನಪದ ಜಗತ್ತು, ಸಂಪುಟ-೯, ಸಂಚಿಕೆ-೩, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೬. ಡಾ. ಚಕ್ಕರೆ ಶಿವಶಂಕರ್, ೨೦೦೪, ಜುಲೈ-ಡಿಸೆಂಬರ್, ಜಾನಪದ ಜಗತ್ತು, ಸಂಯುಕ್ತ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೭. ಪ್ರೊ. ಡಿ. ಲಿಂಗಯ್ಯ, ೧೯೯೯, ಅಕ್ಟೋಬರ್-ಡಿಸೆಂಬರ್, ಜಾನಪದ ಜಗತ್ತು, ಸಂಪುಟ-೨೦, ಸಂಚಿಕೆ-೪, ವಿಶೇಷ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೮. ಎಚ್.ಎಲ್. ನಾಗೇಗೌಡ, ೧೯೮೯, ಜುಲೈ-ಆಗಸ್ಟ್, ಜಾನಪದ ಜಗತ್ತು, ಸಂಪುಟ-೧೦, ಸಂಚಿಕೆ-೪, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೯. ಪ್ರೊ. ಡಿ. ಲಿಂಗಯ್ಯ, ೧೯೯೯, ಜನವರಿ-ಮಾರ್ಚ್, ಜಾನಪದ ಜಗತ್ತು, ಸಂಪುಟ-೨೦, ಸಂಚಿಕೆ-೧, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೦. ವಿ.ಎನ್. ಶಿವರಾಮು, ೧೯೮೭, ಮಾರ್ಚ್-ಏಪ್ರಿಲ್, ಜಾನಪದ ಜಗತ್ತು, ಸಂಪುಟ-೮, ಸಂಚಿಕೆ-೨, ವಿಶೇಷ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೧. ಗೊ.ರು. ಚನ್ನಬಸಪ್ಪ, ೧೯೮೧ ಜನವರಿ ೧೯೮೨, ಜಾನಪದ ಜಗತ್ತು, ಸಂಯುಕ್ತ ವಿಶೇಷ ಸಂಚಿಕೆ, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೨. ಡಾ. ಚಕ್ಕರೆ ಶಿವಶಂಕರ್, ೨೦೦೦, ಜುಲೈ-ಸೆಪ್ಟೆಂಬರ್, ಜಾನಪದ ಜಗತ್ತು, ಸಂಪುಟ-೨೧, ಸಂಚಿಕೆ-೩, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೩. ಪ್ರೊ. ಡಿ. ಲಿಂಗಯ್ಯ, ೨೦೦೦, ಅಕ್ಟೋಬರ್-ಡಿಸೆಂಬರ್, ಜಾನಪದ ಜಗತ್ತು, ಸಂಪುಟ-೨೧-೨೨, ಸಂಚಿಕೆ-೪-೧, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೪. ಎಚ್.ಎಲ್. ನಾಗೇಗೌಡ, ೧೯೯೦, ನವೆಂಬರ್-ಡಿಸೆಂಬರ್, ಜಾನಪದ ಜಗತ್ತು ಸಂಪುಟ-೧೧, ಸಂಚಿಕೆ-೬, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೫. ಎಚ್.ಎಲ್. ನಾಗೇಗೌಡ, ೧೯೯೧, ಆಗಸ್ಟ್-ಸೆಪ್ಟೆಂಬರ್, ಜಾನಪದ ಜಗತ್ತು, ಸಂಪುಟ-೧೨, ಸಂಚಿಕೆ-೩, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೬. ಎಚ್.ಎಲ್. ನಾಗೇಗೌಡ, ೧೯೮೮, ಜುಲೈ-ಆಗಸ್ಟ್, ಜಾನಪದ ಜಗತ್ತು, ಸಂಪುಟ-೯, ಸಂಚಿಕೆ-೪, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೭. ಡಾ. ಚಕ್ಕರೆ ಶಿವಶಂಕರ್, ೨೦೦೭, ಅಕ್ಟೋಬರ್-ಡಿಸೆಂಬರ್, ಜಾನಪದ ಜಗತ್ತು, ಸಂಪುಟ-೨೮, ಸಂಚಿಕೆ-೪, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೮. ಪ್ರೊ. ಡಿ. ಲಿಂಗಯ್ಯ, ೨೦೦೫, ಅಕ್ಟೋಬರ್-ಡಿಸೆಂಬರ್, ಜಾನಪದ ಜಗತ್ತು, ಸಂಪುಟ-೨೬, ಸಂಚಿಕೆ-೪, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೯. ಎಚ್.ಎಲ್. ನಾಗೇಗೌಡ, ೧೯೯೩, ಜನವರಿ-ಜೂನ್, ಜಾನಪದ ಜಗತ್ತು, ಸಂಪುಟ-೧೪, ಸಂಚಿಕೆ-೧, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

**ನಿಯತಕಾಲಿಕೆಗಳು**

೧. ಬಯಲು ಸೀಮೆ, ದಿನಾಂಕ ೨೭.೦೯.೨೦೦೬.

೨. ಪ್ರಜಾವಾಣಿ, ಅಕ್ಟೋಬರ್ ೧೯೯೩ರ ವರದಿ, ಜನಪದ ಸಂಗ್ರಹ ಸದಾ ಚಿರಂತನ.

೩. ಲಂಕೇಶ್ ಪತ್ರಿಕೆ, ಸೆಪ್ಟೆಂಬರ್ ೨೮, ೨೦೦೫.

೪. ಪ್ರಜಾವಾಣಿ, ಜುಲೈ ೧೦, ೨೦೦೫, ಜಾನಪದ ತಾನಾಗಿ ಉಳಿಯದು.

೫. ಉಷಾಕಿರಣ, ಬುಧವಾರ ಮಾರ್ಚ್ ೧೫, ೨೦೦೬, ಜಾನಪದ ಲೋಕದ ಅಭಿವೃದ್ಧಿಗೆ ಸರ್ಕಾರದ ಚಿಂತನೆ.

೬. ವಿಜಯ ಕರ್ನಾಟಕ, ಫೆಬ್ರವರಿ ೧೧, ೨೦೦೮, ಸಂಸ್ಕೃತಿ ಉಳಿವಿಗೆ ಡಾ. ಎಚ್.ಎಲ್.ಎನ್. ಶ್ರಮ.

೭. ಸಂಯುಕ್ತ ಕರ್ನಾಟಕ , ಮೇ ೦೪, ೨೦೦೬, ಜಾನಪದ ಲೋಕದ ಅಭಿವೃದ್ಧಿಯಲ್ಲಿ ಸರ್ಕಾರದ ಪಾತ್ರ.

೮. ಒಡೆಯರ್ ಪತ್ರಿಕೆ, ಸಂಜೆ ದಿನಪತ್ರಿಕೆ, ಮೇ ೨೮, ೨೦೦೭, ಬುಧವಾರ, ಜಾನಪದ ಸಂಗ್ರಹಣೆ.

೯. ಬಹುಜನ ಕನ್ನಡಿಗರು, ಪ್ರಗತಿಪರ ಕನ್ನಡ ಪ್ರಾಕ್ಷಿಕ ಪತ್ರಿಕೆ, ಅಕ್ಟೋಬರ್ ೧೬-೩೧ ೨೦೦೫, ಜಾನಪದ ಲೋಕೋತ್ಸವ ಕಾರ್ಯಕ್ರಮಗಳು.

೧೦. ಸಾಪ್ತಾಹಿಕ ಪ್ರಭ, ಅಕ್ಟೋಬರ್ ೦೨, ೨೦೦೫, ಜಾನಪದ ಲೋಕ ವಿಹಂಗಮ ನೋಟ.

೧೧. ಉದಯವಾಣಿ, ಫೆಬ್ರವರಿ ೦೬, ೨೦೦೮, ಜಾನಪದ ಲೋಕೋತ್ಸವ.

೧೨. ಬೆಂಗಳೂರು ಗ್ರಾಮಾಂತರ ವಿಜಯ, ಫೆಬ್ರವರಿ ೧೦, ಶನಿವಾರ, ೨೦೦೭, ಸುವರ್ಣ ಲೋಕೋತ್ಸವ.

೧೩. ಬಯಲು ಸೀಮೆ, ಸೆಪ್ಟೆಂಬರ್ ೨೪, ೨೦೦೫, ಜಾನಪದ ಲೋಕದ ರೂವಾರಿ ನಾಗೇಗೌಡ.

೧೪. ವಿಜಯ ಕರ್ನಾಟಕ, ಫೆಬ್ರವರಿ ೧೪, ಗುರುವಾರ, ೨೦೦೮, ಜನಪದ ಕಲೆಗಳ ಉಳಿವು.

೧೫. ಪ್ರಜಾವಾಣಿ, ಜುಲೈ ೦೮, ೨೦೦೮, ಜಾನಪದ ಲೋಕಕ್ಕೆ ಹೈಟೆಕ್ ಸ್ಪರ್ಶ.

೧೬. ಪ್ರಜಾವಾಣಿ, ಮೇ ೩೦, ೨೦೦೭, ಜಾನಪದ ಲೋಕದಲ್ಲಿ ಸುವರ್ಣ ಲೋಕೋತ್ಸವ.

• • •

## ೨. ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಜಾತಿ | ಸ್ಥಳ |
|---|---|---|---|---|---|
| ೧. | ಸರಸವಾಣಿ | ೩೪ | ಕಛೇರಿ ಸಹಾಯಕಿ | ಒಕ್ಕಲಿಗ | ಜಾನಪದ ಲೋಕ |
| ೨. | ಭೈರಪ್ಪ | ೩೫ | ತೋಟಗಾರಿಕೆ ಸಹಾಯಕ | ಒಕ್ಕಲಿಗ | ಜಾನಪದ ಲೋಕ |
| ೩. | ಗುರುಸ್ವಾಮಿ ಎಸ್. | ೩೮ | ಸ್ವಾಗತ ಕಚೇರಿ ಅಟೆಂಡರ್ | ಒಕ್ಕಲಿಗ | ಜಾನಪದ ಲೋಕ |
| ೪. | ಸಿದ್ಧಲಿಂಗಯ್ಯ | ೪೦ | ಎಲೆಕ್ಟ್ರಿಷಿಯನ್ | ಒಕ್ಕಲಿಗ | ಜಾನಪದ ಲೋಕ |
| ೫. | ನರಸಿಂಹಯ್ಯ | ೩೮ | ಮ್ಯೂಸಿಯಂ ಅಟೆಂಡರ್ | ಒಕ್ಕಲಿಗ | ಜಾನಪದ ಲೋಕ |
| ೬. | ಎನ್. ಪ್ರಕಾಶ್ | ೪೦ | ತೋಟಗಾರ | ಪ.ಜಾತಿ | ಜಾನಪದ ಲೋಕ |
| ೭. | ಅಪ್ಪಾಚಾರಿ | ೩೬ | ತೋಟಗಾರ | ಆಚಾರಿ | ಜಾನಪದ ಲೋಕ |
| ೮. | ಮಲ್ಲಯ್ಯ | ೪೦ | ಮ್ಯೂಸಿಯಂ ದಳಾಯಿತ | ಪ.ಪಂ. | ಜಾನಪದ ಲೋಕ |
| ೯. | ಗೌರಮ್ಮ | ೪೬ | ಸ್ವೀಪರ್ | ಒಕ್ಕಲಿಗ | ಜಾನಪದ ಲೋಕ |
| ೧೦. | ಚಿಕ್ಕತಾಯಮ್ಮ | ೪೧ | ಸ್ವೀಪರ್ | ಪ.ಜಾತಿ | ಜಾನಪದ ಲೋಕ |
| ೧೧. | ಬಸವರಾಜ ಕೆ. | ೪೯ | ಕಾವಲುಗಾರ | ಪ.ಜಾತಿ | ಜಾನಪದ ಲೋಕ |
| ೧೨. | ನಾಗರಾಜು | ೩೬ | ಕಾವಲುಗಾರ | ಒಕ್ಕಲಿಗ | ಜಾನಪದ ಲೋಕ |
| ೧೩. | ಪ್ರೊ. ಎಂ. ಶಿವನಂಜಯ್ಯ | ೬೦ | ಆಡಳಿತಾಧಿಕಾರಿ | ಒಕ್ಕಲಿಗ | ಜಾನಪದ ಲೋಕ |
| ೧೪. | ಡಾ. ಕುರುವಬಸವರಾಜ್ | ೫೮ | ಮ್ಯೂಸಿಯಂ ಕ್ಯುರೇಟರ್ | ಲಿಂಗಾಯತ | ಜಾನಪದ ಲೋಕ |
| ೧೫. | ಬಿ.ಪಿ. ಪ್ರಕಾಶ್ | ೪೭ | ಜ್ಯೂನಿಯರ್ ಇಂಜಿನಿಯರ್ | ಒಕ್ಕಲಿಗ | ಜಾನಪದ ಲೋಕ |

| ೧೬. | ಪುಟ್ಟರಾಮಯ್ಯ | ೪೯ | ತೋಟಗಾರ | ಪ.ಪಂ. | ಜಾನಪದ ಲೋಕ |
|---|---|---|---|---|---|
| ೧೭. | ಶಿವಯ್ಯ | ೩೮ | ತೋಟಗಾರ | ಪ.ಜಾ. | ಜಾನಪದ ಲೋಕ |
| ೧೮. | ಚಿಕ್ಕಯ್ಯ | ೪೮ | ತೋಟಗಾರ | ಒಕ್ಕಲಿಗ | ಜಾನಪದ ಲೋಕ |
| ೧೯. | ಶಿವಣ್ಣ | ೪೩ | ಜನಪದ ಕಲೆಗಳ ತರಬೇತಿದಾರ | ಒಕ್ಕಲಿಗ | ಅಂಕನಹಳ್ಳಿ |
| ೨೦. | ಪುರುಷೋತ್ತಮ | ೨೨ | ಜಾನಪದ ವಿದ್ಯಾರ್ಥಿ | ಗೊಲ್ಲ | ರಾಮನಗರ |
| ೨೧. | ಬಿಂದುರಾಣಿ ಎಸ್. | ೨೨ | ಜಾನಪದ ವಿದ್ಯಾರ್ಥಿ | ಒಕ್ಕಲಿಗ | ಎಸ್.ಬಿ. ಹಳ್ಳಿ |
| ೨೨. | ಮೋಹನ್ ಎಸ್. | ೨೦ | ಜಾನಪದ ವಿದ್ಯಾರ್ಥಿ | ಪ.ಜಾ. | ರಾಮನಗರ |

• • •



ಜಾನಪದ ಲೋಕದ ಹೆಬ್ಬಾಗಿಲು



ಜಾನಪದ ಲೋಕದ ರೂವಾರಿ ಡಾ॥ ಎಚ್.ಎಲ್. ನಾಗೇಗೌಡರು



ಜಾನಪದ ಲೋಕದ ಲಾಂಛನ



ಮನೆ ಬಳಕೆ ಮತ್ತು ಉಗ್ರಾಣ ವಸ್ತುಗಳ ಪ್ರದರ್ಶನ



ಅಡುಗೆ ಮನೆ ಸಲಕರಣೆಗಳ ಪ್ರದರ್ಶನ



ಕೃಷಿ ಸಲಕರಣೆಗಳ ಪ್ರದರ್ಶನ



ಜಾನಪದ ಲೋಕದ ಆಡಳಿತ ಕಛೇರಿ




ಲೋಕಮಾತಾ ಮಂದಿರ ವಸ್ತು ಸಂಗ್ರಹಾಲಯ



ಗೃಹ ಬಳಕೆ ವಸ್ತುಗಳ ಪ್ರದರ್ಶನ




ನಾಗೇಗೌಡರ ಜನಪದ ಬೆಳವಣಿಗೆಯನ್ನು ಬಿಂಬಿಸುವ ಚಿತ್ರ ಕುಟೀರ



ಜಾನಪದ ದಿಗ್ಗಜ ಡಾ।। ಎಚ್.ಎಲ್. ನಾಗೇಗೌಡರು



ನಾಗೇಗೌಡರು ಬೆಳೆದು ಬಂದ ದಾರಿಯನ್ನು ತೋರಿಸುವ ಚಿತ್ರಗಳು



ಜನಪದ ಕಲಾವಿದರನ್ನು ವಿಚಾರಿಸುತ್ತಿರುವ ನಾಗೇಗೌಡರ ಚಿತ್ರಗಳು




ನಾಗೇಗೌಡರು ರಚಿಸಿರುವ ದಿನಚರಿಗಳು, ಕೃತಿಗಳು, ನಾಟಕ, ಕಥೆ, ಕಾದಂಬರಿಗಳು




ಲೋಕಮಹಲ್ ವಸ್ತು ಸಂಗ್ರಹಾಲಯ



ಗೃಹೋಪಯೋಗಿ ಮತ್ತು ಪೂಜಾ ಸಾಮಗ್ರಿಗಳು



ವಿವಿಧ ಬಗೆಯ ಪೌರಾಣಿಕ ಗೊಂಬೆಗಳು



ಮನೆ ಬಳಕೆ ಮತ್ತು ಮದುವೆ ಸಂಬಂಧಿ ವಸ್ತುಗಳು



ವಿವಿಧ ಬಗೆಯ ಆಯುಧಗಳು



ಧಾರವಾಡ ಭಾಗದ ಸೂತ್ರದ ಗೊಂಬೆಗಳು




ವಿವಿಧ ಬಗೆಯ ತೊಗಲುಗೊಂಬೆಗಳು



ಯಕ್ಷಗಾನದ ಪಾತ್ರದಾರಿ ಗೊಂಬೆಗಳು.



ವಿವಿಧ ಬಗೆಯ ಜನಪದ ವಾದ್ಯಗಳು.



ತಾಳವಾದ್ಯಗಳು



ವಿವಿಧ ಬಗೆಯ ನಾಣ್ಯಗಳು



ಜನಪದ ವಿಗ್ರಹಗಳು ಮತ್ತು ತಾಂಬೂಲದ ಸಲಕರಣೆಗಳು




ಸರಸ್ವತಿ ಮಂದಿರ



ಜಾನಪದ ಮಹಾವಿದ್ಯಾಲಯದ ಡಿಪ್ಲೊಮಾ ವಿದ್ಯಾರ್ಥಿಗಳು ಉಪನ್ಯಾಸಕರೊಂದಿಗೆ



ಕ್ರಿ.ಶ. ೧೯೦೨ರ ಕಾಲದ ಮರದ ರಥ



ಒಂದು ಸಾವಿರ ವರ್ಷಗಳಿಗೂ ಹಿಂದಿನ ವೀರಗಲ್ಲು, ಸತೀಕಲ್ಲು, ಶಿಲಾ ಶಾಸನಗಳು ಶಿಲ್ಪಮಾಳದಲ್ಲಿರುವುದು



ಜನಪದ ಕಲಾವಿದರನ್ನು ವಿಚಾರಿಸುತ್ತಿರುವ ನಾಡೋಜ ಜಿ . ನಾರಾಯಣ ಅವರು ಮತ್ತು
ಆಡಳಿತಾಧಿಕಾರಿ ಪ್ರೊ. ಎಂ. ಶಿವನಂಜಯ್ಯ



ಲೋಕೋತ್ಸವದಲ್ಲಿ ಕಾರ್ಯಕ್ರಮದಲ್ಲಿ ಅಚ್ಚಲು ಡೊಳ್ಳು ಕುಣಿತ ಕಲಾವಿದರು



ಜನಪದ ಸಂಗೀತ ಶಿಬಿರದಲ್ಲಿ ಪಾಲ್ಗೊಂಡಿರುವ ಮಹಿಳೆಯರು



ದಸರಾ ಉತ್ಸವದಲ್ಲಿ ಅಂಕನಹಳ್ಳಿ ಶಿವಣ್ಣ ಅವರಿಂದ ಪೂಜಾ ಕುಣಿತ ಪ್ರದರ್ಶನ



ಜನಪದ ನೃತ್ಯ, ನಾಟಕ, ಕಲಾ ಪ್ರದರ್ಶನಕ್ಕೆ ಮೀಸಲಾದ ಬಯಲು ರಂಗಮಂದಿರ




ಜನಪದ ಹಾಡು, ಕಲೆಗಳ ವಿಡಿಯೋ ಪ್ರದರ್ಶನ ಕೇಂದ್ರ



ದೇಶಿ ಕ್ರೀಡೆಗಳನ್ನು ಉದ್ಘಾಟಿಸುತ್ತಿರುವ ನಾಡೋಜ ಜಿ. ನಾರಾಯಣ ಅವರು



ಜನಪದ ಕಲೆಗಳ ತರಬೇತಿ ಶಿಬಿರದಲ್ಲಿ ಪಾಲ್ಗೊಂಡಿರುವ ಜನಪದ ಕಲಾವಿದರು



ಜಾನಪದ ಸಂಶೋಧನಾ ಕಮ್ಮಟದಲ್ಲಿ ಪಾಲ್ಗೊಂಡಿರುವ ವಿದ್ಯಾರ್ಥಿಗಳು

